CPMG / KA / BG-GPO/13/2003-2005

ವಿಶ್ವಮಾನವ ವರ್ಷ



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೩೯ | ಬೆಂಗಳೂರು, ಗುರುವಾರ, ಫೆಬ್ರವರಿ ೧೨, ೨೦೦೪ (ಮಾಘ ೨೩, ಶಕ ವರ್ಷ ೧೯೨೫) | ಸಂಚಿಕೆ ೦೭ |
|---|---|---|

## ಭಾಗ-೪ಎ

## ರಾಜ್ಯದ ವಿಧೇಯಕಗಳ ಮತ್ತು ಅವುಗಳ ಮೇಲೆ ಪರಿಶೀಲನಾ ಸಮಿತಿಯ ವರದಿಗಳು, ರಾಜ್ಯದ ಅಧಿನಿಯಮಗಳು ಮತ್ತು ಅಧ್ಯಾದೇಶಗಳು, ಕೇಂದ್ರದ ಮತ್ತು ರಾಜ್ಯದ ಶಾಸನಗಳ ಮೇರೆಗೆ ರಾಜ್ಯ ಸರ್ಕಾರವು ಹೊರಡಿಸಿದ ಸಾಮಾನ್ಯ ಶಾಸನಬದ್ಧ ನಿಯಮಗಳು ಮತ್ತು ರಾಜ್ಯಾಂಗದ ಮೇರೆಗೆ ರಾಜ್ಯಪಾಲರು ಮಾಡಿದ ನಿಯಮಗಳು, ಹಾಗೂ ಕರ್ನಾಟಕ ಉಚ್ಚ ನ್ಯಾಯಾಲಯವು ಮಾಡಿದ ನಿಯಮಗಳು.

**ವಾರ್ತಾ, ಪ್ರವಾಸೋದ್ಯಮ ಹಾಗೂ ಯುವಜನ ಸೇವಾ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ವಾಪ್ರಯು 66 ಪಿಐಎಫ್ 2002, ಬೆಂಗಳೂರು, ದಿನಾಂಕ:30ನೇ ಡಿಸೆಂಬರ್, 2003**

ಶ್ರೀ ಕಂಠೀರವ ಸ್ಟುಡಿಯೋಸ್ ಲಿಮಿಟೆಡ್ ನಿಯಮಾವಳಿಗಳು 75 (ಎ) ಅನುಚ್ಛೇದದಿಂದ ಪ್ರದತ್ತವಾದ ಅಧಿಕಾರವನ್ನು ಉಪಯೋಗಿಸಿಕೊಂಡು, ಕರ್ನಾಟಕ ಸರ್ಕಾರವು ಡಾ: ಜಿ. ಪರಮೇಶ್ವರ್, ಉನ್ನತ ಶಿಕ್ಷಣ ಹಾಗೂ ವಾರ್ತಾ ಇಲಾಖೆ ಸಚಿವರು ಇವರನ್ನು ತಕ್ಷಣದಿಂದ ಅನ್ವಯವಾಗುವಂತೆ ಶ್ರೀ ಕಂಠೀರವ ಸ್ಟುಡಿಯೋಸ್ ಲಿಮಿಟೆಡ್‌ನ ನಿರ್ದೇಶಕರ ಮಂಡಳಿಯಲ್ಲಿ ನಿರ್ದೇಶಕರನ್ನಾಗಿ ನಾಮ ನಿರ್ದೇಶನ ಮಾಡಿ ಇದೇ ನಿಯಮಾವಳಿಗಳ 86 (ಕೆ) ಅನುಚ್ಛೇದದಿಂದ ಪ್ರದತ್ತವಾದ ಅಧಿಕಾರದನ್ವಯ ತಕ್ಷಣದಿಂದ ಜಾರಿಗೆ ಬರುವಂತೆ ಮುಂದಿನ ಆದೇಶದವರೆಗೆ ಇವರನ್ನು ಶ್ರೀ ಕಂಠೀರವ ಸ್ಟುಡಿಯೋಸ್ ಲಿಮಿಟೆಡ್‌ನ ಅಧ್ಯಕ್ಷರನ್ನಾಗಿ ನೇಮಕ ಮಾಡಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್. ಸೀತಮ್ಮ**

ಪಿ.ಆರ್. 1348

ಸರ್ಕಾರದ ಅಧೀನ ಕಾರ್ಯದರ್ಶಿ,

ವಾರ್ತಾ, ಪ್ರವಾಸೋದ್ಯಮ ಹಾಗೂ ಯುವಜನ ಸೇವಾ ಇಲಾಖೆ.

**ಶಿಕ್ಷಣ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ಇಡಿ 129 ಎಲ್ಐಬಿ 2003, ಬೆಂಗಳೂರು, ದಿನಾಂಕ:18ನೇ ಡಿಸೆಂಬರ್, 2003**

ಕರ್ನಾಟಕ ಸಾರ್ವಜನಿಕ ಗ್ರಂಥಾಲಯಗಳು ಅಧಿನಿಯಮ 1965ರ ಕರ್ನಾಟಕ 10ನೇ ಅಧಿನಿಯಮ ಪ್ರಕರಣ 17ರ ಉಪಪ್ರಕರಣ (1)ರಲ್ಲಿನ ಪ್ರದತ್ತವಾದ ಅಧಿಕಾರದನ್ವಯ, ಮಂಗಳೂರು ನಗರ ಕೇಂದ್ರ ಗ್ರಂಥಾಲಯ ಪ್ರಾಧಿಕಾರಕ್ಕೆ ಈ ಕೆಳಕಂಡ ಸದಸ್ಯರನ್ನು ನಾಮಕರಣ ಮಾಡಿ ಆದೇಶಿಸಿದೆ.

17(1) (ಹೆಚ್): 1) ಶ್ರೀ ದಿನೇಶ್ ಪಿ.ಎಸ್.
ಸನ್ ಆಫ್ ದಿ: ಸಂಜೀವ ಮೇಸ್ತ್ರಿ, ನಗರಪಾಲಿಕೆ ವಸತಿ ಗೃಹ, ಬ್ಲಾಕ್-ಡಿ,
ರೂಂ ನಂಬರ್ 11, ಮಹಾಕಾಳಿ ಪಡ್ಪು, ಜಪ್ಪು, ಮಂಗಳೂರು-575002.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಎನ್. ಸೋಮಶೇಖರ್**

ಪಿ.ಆರ್. 1349

ಸರ್ಕಾರದ ಅಧೀನ ಕಾರ್ಯದರ್ಶಿ,

ಶಿಕ್ಷಣ ಇಲಾಖೆ.

## ಸಹಕಾರ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಸಿಎಂಡಬ್ಲ್ಯೂ 131 ಸಿಎನ್‌ಎಸ್ 2003, ಬೆಂಗಳೂರು, ದಿನಾಂಕ:27ನೇ ಡಿಸೆಂಬರ್, 2003**

ಸರ್ಕಾರದ ಅಧಿಸೂಚನೆ ಸಂಖ್ಯೆ:ಸಿಎಂಡಬ್ಲ್ಯೂ 07 ಸಿಎನ್‌ಎಸ್ 2001, ದಿನಾಂಕ:01-10-2003ರಲ್ಲಿ ಹಾಸನ ಜಿಲ್ಲೆ ಹಾಸನ ಜನತಾ ಬಜಾರ್, ಹಾಸನ ಇದರ ಆಡಳಿತ ಮಂಡಳಿಗೆ ಮಾಡಿದ್ದ ಶ್ರೀ ರುಕ್ಮಾಂಗದ ಮಾಜಿ ಗ್ರಾಮ ಪಂಚಾಯ್ತಿ ಅಧ್ಯಕ್ಷರು, ಅಲಸನಹಳ್ಳಿ ಗ್ರಾಮ ಇವರ ನಾಮನಿರ್ದೇಶನವನ್ನು ಈ ಕೂಡಲೇ ಜಾರಿಗೆ ಬರುವಂತೆ ರದ್ದುಪಡಿಸಿದೆ.

ಇವರ ಸ್ಥಾನದಲ್ಲಿ ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಕಲಂ 29ರ ಉಪ ಕಲಂ (1)ರ ಮೇರೆಗೆ ದತ್ತವಾದ ಅಧಿಕಾರಗಳನ್ನು ಚಲಾಯಿಸಿ ಕರ್ನಾಟಕ ಸರ್ಕಾರವು ಶ್ರೀ ರಮೇಶ, ಮಾಜಿ ಗ್ರಾಮ ಪಂಚಾಯಿತಿ ಅಧ್ಯಕ್ಷರು, ಹರವನಹಳ್ಳಿ ಗ್ರಾಮ, ಹರವನಹಳ್ಳಿ ಅಂಚೆ, ಸಾಲಗಾಮೆ ಹೋಬಳಿ, ಹಾಸನ ತಾಲ್ಲೂಕು ಇವರನ್ನು ಹಾಸನ ಜಿಲ್ಲೆ ಹಾಸನ ಜನತಾ ಬಜಾರ್, ಹಾಸನ ಇದರ ಆಡಳಿತ ಮಂಡಳಿಯ ಸದಸ್ಯರನ್ನಾಗಿ ಈ ಕೂಡಲೇ ಜಾರಿಗೆ ಬರುವಂತೆ ಮತ್ತು ಮುಂದಿನ ಆದೇಶದವರೆವಿಗೂ ನಾಮನಿರ್ದೇಶನ ಮಾಡಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಆರ್.ಎಸ್. ಹುಚ್ಚಾಚಾರಿ**
ವಿಶೇಷ ಕರ್ತವ್ಯಾಧಿಕಾರಿ,
ಸಹಕಾರ ಇಲಾಖೆ.

ಪಿ.ಆರ್. 1350

### ತಿದ್ದುಪಡಿ ಆದೇಶ

**ಸಂಖ್ಯೆ: ಸಇ 145 ಸಂಮಾಸ 2003, ಬೆಂಗಳೂರು, ದಿನಾಂಕ:29ನೇ ಡಿಸೆಂಬರ್, 2003**

ಸರ್ಕಾರದ ಆದೇಶ ಸಂಖ್ಯೆ:ಸಿಎಂಡಬ್ಲ್ಯೂ 115 ಸಿಎಲ್‌ಎಸ್ 2003 (ಭಾಗ), ದಿನಾಂಕ:23-10-2003ರ ಆದೇಶ ಭಾಗದಲ್ಲಿಯ ಷರತ್ತು ಸಂಖ್ಯೆ:(6)ರ ಸಾಲು 4 ಮತ್ತು 5ರಲ್ಲಿಯ ಚಿಕ್ಕಮಗಳೂರು ಜಿಲ್ಲಾ ಸಹಕಾರ ಸಂಘಗಳ ಉಪ ನಿಬಂಧಕರು, ಈ ಸಭೆಯನ್ನು ಕರೆಯಲು ಸಂಚಾಲಕರಾಗಿರತಕ್ಕದ್ದು ಎಂಬುದಕ್ಕೆ ಬದಲಾಗಿ "ಕೋಮಾರ್ಕ್ ಸಂಸ್ಥೆ, ಹಾಸನ ಇದರ ವ್ಯವಸ್ಥಾಪಕ ನಿರ್ದೇಶಕರು, ಈ ಸಭೆ ಕರೆಯಲು ಸಂಚಾಲಕರಾಗಿರತಕ್ಕದ್ದು" ಎಂಬುದಾಗಿ ತಿದ್ದಿ ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಆರ್.ಎಸ್. ಹುಚ್ಚಾಚಾರಿ**
ವಿಶೇಷ ಕರ್ತವ್ಯಾಧಿಕಾರಿ,
ಸಹಕಾರ ಇಲಾಖೆ.

ಪಿ.ಆರ್. 1351

### ಅಧಿಸೂಚನೆ

**ಸಂಖ್ಯೆ: ಸಿಎಂಡಬ್ಲ್ಯೂ 332 ಸಸಕಾ 2003, ಬೆಂಗಳೂರು, ದಿನಾಂಕ:31ನೇ ಡಿಸೆಂಬರ್, 2003**

ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 121ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಘಟಪ್ರಭ ಸಹಕಾರಿ ಸಕ್ಕರೆ ಕಾರ್ಖಾನೆ (ನಿ), ಗೋಕಾಕ ಇದಕ್ಕೆ ಅನ್ವಯವಾಗುವಂತೆ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 27(1)ರಿಂದ ವಿನಾಯಿತಿ ನೀಡಿ ಸದರಿ ಕಾರ್ಖಾನೆಯ 2002-03ನೇ ಸಾಲಿನ ವಾರ್ಷಿಕ ಮಹಾಸಭೆಯನ್ನು ದಿನಾಂಕ 31-3-2004 ರೊಳಗೆ ನಡೆಸಲು ಕಾಲಾವಕಾಶ ನೀಡಿದೆ.

ಈ ಸಕ್ಕರೆ ಕಾರ್ಖಾನೆಯ ವಾರ್ಷಿಕ ಮಹಾಸಭೆಗೆ ಸಂಬಂಧಿಸಿದಂತೆ ನ್ಯಾಯಾಲಯದ ಯಾವುದೇ ಆದೇಶವಿದ್ದಲ್ಲಿ ಈಗ ನೀಡಲಾಗುತ್ತಿರುವ ಅವಧಿ ವಿಸ್ತರಣಾ ಆದೇಶವು ಊರ್ಜಿತವಾಗುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಅಹ್ಮದ್.ಎ.ಮುಖ್ತಿದರ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಹಕಾರ ಇಲಾಖೆ.

ಪಿ.ಆರ್. 1354

### ಅಧಿಸೂಚನೆ

**ಸಂಖ್ಯೆ: ಸಿಎಂಡಬ್ಲ್ಯೂ 441 ಸಿಎನ್‌ಎಸ್ 2000 (ಭಾಗ), ಬೆಂಗಳೂರು, ದಿನಾಂಕ:26ನೇ ಡಿಸೆಂಬರ್, 2003**

ಸರ್ಕಾರದ ಅಧಿಸೂಚನೆ ಸಂಖ್ಯೆ:ಸಿಎಂಡಬ್ಲ್ಯೂ 441 ಸಿಎನ್‌ಎಸ್ 2000 ದಿನಾಂಕ 10.09.2003ರಲ್ಲಿ ಧಾರವಾಡ ಜಿಲ್ಲೆ ಕಲಘಟಗಿ ತಾಲ್ಲೂಕಿನ ಹಿರೇಹೊನ್ನಿಹಳ್ಳಿ ವ್ಯವಸಾಯ ಸೇವಾ ಸಹಕಾರ ಸಂಘ ನಿ., ಹಿರೇಹೊನ್ನಿಹಳ್ಳಿ, ಇದರ ಆಡಳಿತ ಮಂಡಳಿಗೆ ಮಾಡಿದ್ದ ಎಲ್ಲಾ ನಾಮನಿರ್ದೇಶನಗಳನ್ನು ಈ ಕೂಡಲೇ ಜಾರಿಗೆ ಬರುವಂತೆ ರದ್ದುಪಡಿಸಿದೆ.

ಮುಂದುವರಿದು, ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಕಲಂ 29ರ ಉಪ ಕಲಂ (1)ರ ಮೇರೆಗೆ ದತ್ತವಾದ ಅಧಿಕಾರಗಳನ್ನು ಚಲಾಯಿಸಿ ಕರ್ನಾಟಕ ಸರ್ಕಾರವು ಈ ಕೆಳಕಂಡವರುಗಳನ್ನು ಧಾರವಾಡ ಜಿಲ್ಲೆ ಕಲಘಟಗಿ ತಾಲ್ಲೂಕಿನ ಹಿರೇಹೊನ್ನಿಹಳ್ಳಿ ವ್ಯವಸಾಯ ಸೇವಾ ಸಹಕಾರ ಸಂಘ ನಿ., ಹಿರೇಹೊನ್ನಿಹಳ್ಳಿ ಇದರ ಆಡಳಿತ ಮಂಡಳಿಯ ಸದಸ್ಯರುಗಳನ್ನಾಗಿ ಈ ಕೂಡಲೇ ಜಾರಿಗೆ ಬರುವಂತೆ ಮತ್ತು ಮುಂದಿನ ಆದೇಶದವರೆವಿಗೂ ನಾಮನಿರ್ದೇಶನ ಮಾಡಿದೆ.

1. ಶ್ರೀ ವಿರೂಪಾಕ್ಷಪ್ಪ ಮಹದೇವಪ್ಪ ಮುಗದ
2. ಶ್ರೀಮತಿ ಶಿವಗಂಗವ್ವ ಕೋಂ ಗುರುಸಿದ್ದಪ್ಪ ದೊಡಮನಿ

3. ಶ್ರೀ ರಾಮಪ್ಪ ಲಕ್ಷ್ಮಣ ಹರಿಜನ

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಆರ್.ಎಸ್. ಹುಚ್ಚಾಚಾರಿ**
ವಿಶೇಷ ಕರ್ತವ್ಯಾಧಿಕಾರಿ,
ಸಹಕಾರ ಇಲಾಖೆ.

ಪಿ.ಆರ್. 1355

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ:ಸಿಆಸುಇ 20 ಭಾಮಮ 2004, ಬೆಂಗಳೂರು, ದಿನಾಂಕ:23ನೇ ಜನವರಿ, 2004**

1994ರ ಕರ್ನಾಟಕ ರಾಜ್ಯ ಅಲ್ಪಸಂಖ್ಯಾತರ ಆಯೋಗದ ಅಧಿನಿಯಮ (1994ರ ಕರ್ನಾಟಕ ಅಧಿನಿಯಮ 31) ಪ್ರಕರಣ 3ರ ಉಪ ಪ್ರಕರಣ (2)ರ, ಖಂಡ (ಎ) ಮತ್ತು ಪ್ರಕರಣ 4ರ ಉಪ ಪ್ರಕರಣ (1)ರಲ್ಲಿ ಹಾಗೂ ಕರ್ನಾಟಕ ಜನರಲ್ ಕ್ಲಾಸಸ್ ಆ್ಯಕ್ಟ್ 1899 (1899ರ ಕರ್ನಾಟಕ ಅಧಿನಿಯಮ3) ಇದರ ಪ್ರಕರಣ 21ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಕರ್ನಾಟಕ ರಾಜ್ಯ ಸರ್ಕಾರವು ದಿನಾಂಕ:28.11.2001ರ ಅಧಿಸೂಚನೆ ಸಂಖ್ಯೆ:ಸಿಆಸುಇ 60 ಭಾಮಮ 99ರಲ್ಲಿ ಮಂಡ್ಯದ, ಗಾಂಧೀನಗರದ ಶ್ರೀ ಮಹಮದ್ ಜಬೀಉಲ್ಲಾ, ಬಿನ್ ಲೇಟ್ ಖಾಸಿಂ ಸಾಬ್ ರವರನ್ನು ಕರ್ನಾಟಕ ರಾಜ್ಯ ಅಲ್ಪ ಸಂಖ್ಯಾತರ ಆಯೋಗದ ಸದಸ್ಯರನ್ನಾಗಿ ನೇಮಿಸಿದ್ದನ್ನು ತಕ್ಷಣದಿಂದ ಜಾರಿಗೆ ಬರುವಂತೆ ರದ್ದುಪಡಿಸಲಾಗಿದೆ.

ಅಲ್ಲದೇ, 1994ರ ಕರ್ನಾಟಕ ರಾಜ್ಯ ಅಲ್ಪಸಂಖ್ಯಾತರ ಆಯೋಗದ ಅಧಿನಿಯಮದ (1994ರ ಕರ್ನಾಟಕ ಅಧಿನಿಯಮ 31)ರ ಪ್ರಕರಣ 3ರ ಉಪ ಪ್ರಕರಣ (2)ರ ಖಂಡ (ಎ) ಹಾಗೂ ಪ್ರಕರಣ 4ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಕರ್ನಾಟಕ ರಾಜ್ಯ ಸರ್ಕಾರವು ಶ್ರೀ ಮೊಹಮ್ಮದ್ ಶಫೀ ಬಿನ್ ಶ್ರೀ ಮೊಹಮ್ಮದ್ ಇಬ್ರಾಹಿಂಸಾಬ್, ಮಾಜಿ ಪುರಸಭಾ ಸದಸ್ಯರು, ನಂ.499, ಪೊಲೀಸ್ ಲೇನ್, ತಿಪಟೂರು, ತುಮಕೂರು ಜಿಲ್ಲೆ ಇವರನ್ನು ಈ ಕೂಡಲೇ ಜಾರಿಗೆ ಬರುವಂತೆ ಕರ್ನಾಟಕ ರಾಜ್ಯ ಅಲ್ಪಸಂಖ್ಯಾತರ ಆಯೋಗದ ಸದಸ್ಯರನ್ನಾಗಿ ನಾಮನಿರ್ದೇಶನ ಮಾಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಸಿ. ಕೃಷ್ಣಮೂರ್ತಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ
(ರಾಜಕೀಯ ವಿಶ್ರಾಂತಿ ವೇತನ).

ಪಿ.ಆರ್. 57

## ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ:ಮಾತಂಇ 05 ಆಡವಿ 2004, ಬೆಂಗಳೂರು, ದಿನಾಂಕ:23ನೇ ಜನವರಿ, 2004**

ಕರ್ನಾಟಕ ಸಾರ್ವಜನಿಕ ಸಂಗ್ರಹಗಳಲ್ಲಿ ಪಾರದರ್ಶಕತೆ ಅಧಿನಿಯಮ 1999 (2000ದ ಕರ್ನಾಟಕ ಅಧಿನಿಯಮ ಸಂಖ್ಯೆ 29)ರ ಪ್ರಕರಣ 7ರ ಉಪಪ್ರಕರಣ (1)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರದ ಉಪಕಾರ್ಯದರ್ಶಿ, ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆ ಇವರನ್ನು ಶ್ರೀ ವಿವೇಕ್ ಕುಲಕರ್ಣಿ, ಸರ್ಕಾರದ ಕಾರ್ಯದರ್ಶಿ ಇವರ ಸ್ಥಾನದಲ್ಲಿ ಸದರಿ ಇಲಾಖೆಗೆ ಸಂಬಂಧಪಟ್ಟಂತೆ ರಾಜ್ಯಕ್ಕಾಗಿ ರಾಜ್ಯ ಟೆಂಡರ್ ಬುಲೆಟಿನ್ ಅಧಿಕಾರಿಯನ್ನಾಗಿ ತಕ್ಷಣದಿಂದ ಜಾರಿಗೆ ಬರುವಂತೆ ನೇಮಕ ಮಾಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಕೆ.ಎಂ. ಆನಂದ**
ಸರ್ಕಾರದ ಅಧೀನ ಕಾರ್ಯದರ್ಶಿ,
ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ಇಲಾಖೆ.

ಪಿ.ಆರ್. 58

## ವಾರ್ತಾ, ಪ್ರವಾಸೋದ್ಯಮ ಹಾಗೂ ಯುವಜನ ಸೇವಾ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ:ವಾಪ್ರಯು 13 ಪ್ರವಾಇ 2004, ಬೆಂಗಳೂರು, ದಿನಾಂಕ:21ನೇ ಜನವರಿ, 2004**

ಶ್ರೀಮತಿ ಪಿ. ಕಾಸೀಂಬಿ, ಸಂಗನಕಲ್ಲು ಗ್ರಾಮ, ಬಳ್ಳಾರಿ ತಾಲ್ಲೂಕು, ಬಳ್ಳಾರಿ ಜಿಲ್ಲೆ, ಇವರನ್ನು ಕರ್ನಾಟಕ ವಸ್ತು ಪ್ರದರ್ಶನ ಪ್ರಾಧಿಕಾರ, ಮೈಸೂರು, ಇಲ್ಲಿಗೆ ಅಧಿಕಾರೇತರ ಸದಸ್ಯರನ್ನಾಗಿ ಶ್ರೀ ಸೋಮಶೇಖರ್, ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಇವರ ಜಾಗದಲ್ಲಿ ತಕ್ಷಣದಿಂದಲೇ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ನಾಮ ನಿರ್ದೇಶನ ಮಾಡಿ ಆದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಸ್. ಸೀತಮ್ಮ**
ಸರ್ಕಾರದ ಅಧೀನ ಕಾರ್ಯದರ್ಶಿ,
ವಾರ್ತಾ, ಪ್ರವಾಸೋದ್ಯಮ ಹಾಗೂ ಯುವಜನ ಸೇವಾ ಇಲಾಖೆ.

ಪಿ.ಆರ್. 59

## ENERGY SECRETARIAT
## CORRIGENDUM
**No. DE 23 PSR 2001/55, Bangalore, Dated: 20th January, 2004**

**Sub:** Exempting Captive Generation sets upto 150 KVA-Reg

**Ref:** Notification No. DE 23 PSR 2001/1077, dated: 31st December 03

In the Notification under reference, the sentence after the word's direction issued under section 8", may be read as follows;

"Government of Karnataka hereby exempt payment of electricity tax on consumption through captive generation units, upto a total installed capacity of 150 KVA per installation (for self-consumption) with effect from 16th October 2003 and till the first day of July 2004, until further orders"

The other contents remain unaltered.

By Order and in the name of the Governor of Karnataka,
**K.L. JAYARAM**
Under Secretary to Government,
Energy Department.

PR-60

## LAW SECRETARIAT
## NOTIFICATION
**No.LAW 610 LCM 1996 (P), Bangalore, Dated:17th January, 2004**

In supersession of the Notification No. LAW 610 LCM 96 (P), in exercise of the powers conferred by the Sub-Section (8) of Section 24 of the Code of Criminal Procedure 1978 (Central Act No. 2 of 1974, as amended by the code of Criminal Procedure (Amendment Act 1978) and Rule 38 of the Karnataka Law Officers (Appointment and Condition of Services) Rule 1977, Shri B. Venkatarao, Retired Joint Director of Prosecutions, Bangalore is appointed as Special Public Prosecutor to conduct prosecution in the case C.C. No. 8282/95 on the file of the Additional (C.M.M. IVth Court, Bangalore arising out of Crime No. 304/94 of K.G. Halli Police Station.

The Renumeration Government Order will be issued seperately after obtaining the concurrence from Finance Department.

By Order and in the name of the Governor of Karnataka,
**S. SRIDHARA**
Asst. Solicitor and Ex.Officio, I/C
Under Secretary to Government,
Law Department (LIT.I)

PR-61

## ಕಂದಾಯ ಸಚಿವಾಲಯ
## ಆದೇಶ
**ಸಂಖ್ಯೆ:ಕಂಇ 228 ಮುನೋಮು 2002, ಬೆಂಗಳೂರು, ದಿನಾಂಕ:21ನೇ ಜನವರಿ, 2004**

ಕರ್ನಾಟಕ ಮುದ್ರಾಂಕ ಅಧಿನಿಯಮ 1957ರ (1957ರ ಕರ್ನಾಟಕ ಕಾಯ್ದೆ 34)ರ ಕಲಂ 9(1)ರ ಪ್ರಾವಿಸೋದಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಕರ್ನಾಟಕ ನೀರಾವರಿ ನಿಗಮವು ರೂ. 275 ಕೋಟಿಗಳ ಆಸ್ತಿಯನ್ನು ಅಡಮಾನ ಮಾಡುವ ಸಮಯದಲ್ಲಿ ತಗಲುವ ಮುದ್ರಾಂಕ ಶುಲ್ಕದಲ್ಲಿ ರೂ. 50,000-00 ಮಾತ್ರ (ಐವತ್ತು ಸಾವಿರ ರೂ.ಗಳು) ನಾಮಿನಲ್ ಮುದ್ರಾಂಕ ಶುಲ್ಕ ವಿಧಿಸಲು ಸರ್ಕಾರವು ವಿನಾಯ್ತಿ ನೀಡಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಅದರ ಅ.ಟಿ. ಸಂಖ್ಯೆ:ಆಇ 1525:ವೆಚ್ಚ-7:2003, ದಿನಾಂಕ: 20.12.2003ರಲ್ಲಿ ನೀಡಿರುವ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಡಿ.ಎನ್. ಶ್ರೀಮುಖಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ
(ನೋಂದಣಿ ಮತ್ತು ಮುದ್ರಾಂಕ)

ಪಿ.ಆರ್. 62

## ಆದೇಶ
**ಸಂಖ್ಯೆ:ಕಂಇ 302 ಮುನೋಮು 2000, ಬೆಂಗಳೂರು, ದಿನಾಂಕ:19ನೇ ಜನವರಿ, 2004**

ಕರ್ನಾಟಕ ಮುದ್ರಾಂಕ ಅಧಿನಿಯಮ 1957ರ (1957ರ ಕರ್ನಾಟಕ ಕಾಯ್ದೆ 34)ರ ಕಲಂ 9(1)(ಎ)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಮೆ: ಚಾಲುಕ್ಯ ಕೋ-ಆಪರೇಟೀವ್ ಇಂಡಸ್ಟ್ರಿಯಲ್ ಎಸ್ಟೇಟ್ ಲಿಮಿಟೆಡ್, ಬಾದಾಮಿ

ಇವರು ಬಾದಾಮಿಯ ಸರ್ವೆ ನಂ. 310:1, 310:2 ಹಾಗೂ 310:3ರಲ್ಲಿ ಒಟ್ಟು 18 ಎಕರೆ ಜಮೀನನ್ನು ಹೊಂದಿದ್ದು, ಜಮೀನಿನ ನೋಂದಣಿ ಸಮಯದಲ್ಲಿ ತಗಲುವ ಮುದ್ರಾಂಕ ಶುಲ್ಕದಲ್ಲಿ ಶೇ. 50ರಷ್ಟು ವಿನಾಯ್ತಿ ನೀಡಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣೆ ಸಂಖ್ಯೆ:ಆಇ 1556:ವೆಚ್ಚ-7:2001, ದಿನಾಂಕ:19.04.2002ರ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಡಿ.ಎನ್. ಶ್ರೀಮುಖಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ
(ನೋಂದಣಿ ಮತ್ತು ಮುದ್ರಾಂಕ)

ಪಿ.ಆರ್. 63

## ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಸಚಿವಾಲಯ

## ಅಧಿಸೂಚನೆ

**ಸಂಖ್ಯೆ: ಅಪಜೀ 40 ಎಫ್‌ಎಎಫ್ 2003, ಬೆಂಗಳೂರು, ದಿನಾಂಕ: 6ನೇ ಜನವರಿ, 2004**

ಕರ್ನಾಟಕ ಅರಣ್ಯ ಕಾಯ್ದೆ ಕಲಂ 4(1)(ಎ) ರಲ್ಲಿ ಪ್ರದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ ಕರ್ನಾಟಕ ಸರ್ಕಾರವು ಶಿವಮೊಗ್ಗ ಜಿಲ್ಲೆ, ತೀರ್ಥಹಳ್ಳಿ ತಾಲ್ಲೂಕು, ಮತ್ತೂರು ಹೋಬಳಿ ಅನುಸೂಚಿಯಲ್ಲಿನ ಗ್ರಾಮದ ಸರಹದ್ದಿಗೆ ಒಳಪಟ್ಟ ಈ ಕೆಳಗೆ ಅನುಸೂಚಿಸಿದ ಪ್ರದೇಶವನ್ನು ಕುವೆಂಪು ಸ್ಮಾರಕ ಜೈವಿಕ ಧಾಮದ " ಮೀಸಲು ಅರಣ್ಯ " ಎಂದು ರಚಿಸಲು ಉದ್ದೇಶಿಸಿದೆ.

**ಅನುಸೂಚಿ**

ಜಿಲ್ಲೆ: ಶಿವಮೊಗ್ಗ    ಹೋಬಳಿ:ಮತ್ತೂರು
ತಾಲ್ಲೂಕು: ತೀರ್ಥಹಳ್ಳಿ    ಅರಣ್ಯದ ಹೆಸರು : ಕುವೆಂಪು ಸ್ಮಾರಕ ಜೈವಿಕಧಾಮದ ಮೀಸಲು ಅರಣ್ಯ

| ಗ್ರಾಮ | ಸರ್ವೆ. ನಂ. | ಅಧಿಸೂಚನೆಗೆ ಒಳಪಟ್ಟ ವಿಸ್ತೀರ್ಣ ಎ. ಗುಂ. | ಹೆಕ್ಟೇರ್ | ಷರಾ |
|---|---|---|---|---|
| 1 | 2 | 3 | 4 | 5 |
| 1) ಇಂಗ್ಲಾಡಿ | 13 | 39 – 06 | | |
| | 31 | 36 – 24 | | |
| 2) ಆಲ್ಮನೆ | 55 | 51 – 00 | | |
| 3) ಹೊನ್ನೇಕೇರಿ | 5 | 00 – 17 | | |
| | 44 | 107 – 34 | | |
| | 45 | 138 – 08 | | |
| | 50 | 53 – 24 | | |
| | 66 | 25 – 39 | | |
| 4) ಹೇರಂಭಾಪುರ | 7 | 47 – 21 | | |
| | 10 | 7 – 04 | | |
| | 11 | 189 – 29 | | |
| | 54 | 25 – 05 | | |
| | 55 | 25 – 06 | | |
| | 56 | 149 – 01 | | |
| 5) ಕೀರಣಕೆರೆ | 10 | 33 – 12 | | |
| | 37 | 39 – 39 | | |
| 6) ಬೆಕ್ಕನೂರು | 2 | 88 – 06 | | |
| | 4 | 58 – 27 | | |
| | 12 | 33 – 33 | | |
| | 21 | 8 – 00 | | |
| 7) ಹಡಗಿನಮಕ್ಕಿ | 1 | 3 – 12 | | |
| | 10 | 48 – 07 | | |
| | 14 | 48 – 17 | | |
| | | 1287 – 11 | | |

2) ಮೇಲಿನ ಅನುಸೂಚಿತ ಪ್ರದೇಶಗಳ ಸಂಕ್ಷಿಪ್ತ ಸರಹದ್ದುಗಳು ಈ ಕೆಳಗಿನಂತಿವೆ.

ಅ) ಉತ್ತರಕ್ಕೆ : ದೇವಂಗಿ, ಕೊಳೂರು, ಆಲ್ಮನೆ ಮತ್ತು ಹೊನ್ನೇಕೇರಿ ಗ್ರಾಮಗಳು

ಆ) ಪೂರ್ವಕ್ಕೆ : ಪಟ್ಲಮನೆ, ಬೆಳ್ಳಂಗಿ, ಹೇರಂಭಾಪುರ, ಕಬಿನಿ ಮತ್ತು ಕೀರಣಕೆರೆ ಗ್ರಾಮಗಳು

ಇ) ದಕ್ಷಿಣಕ್ಕೆ : ಕೊಪ್ಪ ತಾಲ್ಲೂಕು, ಹಿರೇಕೊಡಗಿ ಗ್ರಾಮ

ಈ) ಪಶ್ಚಿಮಕ್ಕೆ : ಬೆಕ್ಕನೂರು, ಹಡಗಿನಮಕ್ಕಿ, ವಾಟಗಾರು ಮತ್ತು ಇಂಗ್ಲಾಡಿ ಗ್ರಾಮಗಳು.

ಸವಿವರವಾದ ಸರಹದ್ದು ವಿವರಣೆ ಅನುಬಂಧದಂತೆ ಇರುತ್ತದೆ.

3) ಶಿವಮೊಗ್ಗ ಜಿಲ್ಲೆಯ ಅರಣ್ಯ ವ್ಯವಸ್ಥಾಪನಾಧಿಕಾರಿಗಳು ಈ ಪ್ರಕರಣಕ್ಕೆ ಕಲಂ (4)(1)(ಸಿ) ಯಂತೆ ವಿಚಾರಣಾಧಿಕಾರಿಯನ್ನಾಗಿ ನೇಮಿಸಿದೆ. ಇವರು ಮೇಲಿನ ಪ್ರದೇಶದ ಮೇಲೆ ಯಾವುದೇ ವ್ಯಕ್ತಿಗೆ ಇರಬಹುದೆನ್ನಲಾದ ಹಕ್ಕುಬಾಧ್ಯತೆಗಳನ್ನು ತೀರ್ಮಾನಿಸುವುದು.

4) ಅರಣ್ಯ ವ್ಯವಸ್ಥಾಪನಾಧಿಕಾರಿಯವರ ತೀರ್ಮಾನದ ಮೇಲೆ ಅಹವಾಲುಗಳನ್ನು ಕರ್ನಾಟಕ ಅರಣ್ಯ ಕಾಯ್ದೆ ಕಲಂ (16) ರಂತೆ ಇತ್ಯರ್ಥ ಮಾಡಿಕೊಳ್ಳಬಹುದಾಗಿದೆ.

**ಅನುಬಂಧ**

**ಸವಿವರವಾದ ಗಡಿ ವಿವರಣೆ**

**ಗ್ರಾಮ : ಹಡಗಿನಮಕ್ಕಿ**

**ಸ.ನಂ.1– 3ಎ. 12ಗು.**

**ಉತ್ತರಕ್ಕೆ:** ಗಡಿರೇಖೆಯು ಇದೇ ಗ್ರಾಮದ ಸ.ನಂ. 1 ಮತ್ತು 28 ಹಾಗೂ ಇಂಗ್ಲಾಡಿ ಗ್ರಾಮದ ಸ.ನಂ. 1 ಮತ್ತು 31 ರ ನಾಲ್ಕುಪ್ಪೆ ಬಾಂದಿನಿಂದ ಪ್ರಾರಂಭಿಸಿ, ಈಶಾನ್ಯಾಭಿಮುಖವಾಗಿ ಇಂಗ್ಲಾಡಿ ಮತ್ತು ಹಡಗಿನಮಕ್ಕಿ ಗ್ರಾಮದ ಸಾಮಾನ್ಯ ಗಡಿಯಲ್ಲೇ ಚಲಿಸುತ್ತಾ 10 ಸರಪಳಿಗಳ ದೂರ ಕ್ರಮಿಸಿದ ಬಿಂದುವಿನಲ್ಲಿ ಸೇರುತ್ತದೆ.

**ಪೂರ್ವಕ್ಕೆ: ದಕ್ಷಿಣ:** ಪುನ: ಇದೇ ಬಿಂದುವಿನಿಂದ ಆಗ್ನೇಯಾಭಿಮುಖವಾಗಿ ಸ.ನಂ. 1 ರ ಮೂಲಕ ಹಾದು ಹೋಗುವ ಹಡಗಿನಮಕ್ಕಿ ಮೀಸಲು ಅರಣ್ಯ ಗಡಿಯನ್ನೇ ಅನುಸರಿಸುತ್ತಾ 20 ಸರಪಳಿಗಳ ದೂರ ಕ್ರಮಿಸಿ ಹಡಗಿನಮಕ್ಕಿ ಗ್ರಾಮದ ಸ.ನಂ.1 ಮತ್ತು 28ರ ಸಾಮಾನ್ಯ ಗಡಿಯಲ್ಲಿನ ಬಿಂದುವಿನಲ್ಲಿ ಸಂಧಿಸುತ್ತದೆ.

**ಪಶ್ಚಿಮಕ್ಕೆ:** ಪುನ: ಇದೇ ಬಿಂದುವಿನಿಂದ ಇದೇ ಸಾಮಾನ್ಯ ಗಡಿಯಲ್ಲಿ ವಾಯುವ್ಯಾಭಿಮುಖವಾಗಿ 21 ಸರಪಳಿ ದೂರವನ್ನು ಕ್ರಮಿಸಿ ಪ್ರಾರಂಭಿಕ ಸ್ಥಾನವನ್ನು ಸೇರುತ್ತದೆ.

**ಸ.ನಂ. 14 ಮತ್ತು 10**

**48.17 ಮತ್ತು 48.07**

**ಉತ್ತರಕ್ಕೆ:** ಪ್ರಾರಂಭಿಕ ಸ್ಥಾನವು ಇದೇ ಗ್ರಾಮದ ಸ.ನಂ. 12, 14 ಮತ್ತು 11 ರ ಮುಕ್ಕುಪ್ಪೆ ಬಾಂದುವಿನಿಂದ ಪ್ರಾರಂಭಿಸಿ ಆಗ್ನೇಯಾಭಿಮುಖವಾಗಿ ಸರ್ವೆ ನಂ. 11 ಮತ್ತು 14ರ ಸಾಮಾನ್ಯ ಗಡಿಯಲ್ಲಿ 13 ಸರಪಳಿಗಳ ದೂರ ಕ್ರಮಿಸಿ ಹಡಗಿನಮಕ್ಕಿ ಮೀಸಲು ಅರಣ್ಯದ ಗಡಿಯಲ್ಲಿ ಸಂಧಿಸುತ್ತದೆ.

**ಪೂರ್ವಕ್ಕೆ:** ಪುನ: ಇಲ್ಲಿಂದ ಸೀಮಾರೇಖೆಯು ಆಗ್ನೇಯಾಭಿಮುಖವಾಗಿ ಸರ್ವೆ ನಂ. 14ರ ಮೂಲಕ ಹಾದು ಹೋಗುವ ಹಡಗಿನಮಕ್ಕಿ ಮೀಸಲು ಅರಣ್ಯದ ಗಡಿಯನ್ನೇ ಅನುಸರಿಸುತ್ತಾ 18 ವರೆ ಸರಪಳಿಗಳ ದೂರ ಕ್ರಮಿಸಿ ಸರ್ವೆ ನಂ.10 ಮತ್ತು 14ರ ಸಾಮಾನ್ಯ ಗಡಿಯಲ್ಲಿ ಸಂಧಿಸುತ್ತದೆ. ಪುನ: ಇಲ್ಲಿಂದ ಆಗ್ನೇಯಾಭಿಮುಖವಾಗಿ ಇದೇ ಸರ್ವೆ ನಂ.10 ರ ಮೂಲಕ ಹಾದು ಹೋಗುವ ಮೀಸಲು ಅರಣ್ಯ ಗಡಿಯನ್ನೇ ಅನುಸರಿಸುತ್ತಾ 11ವರೆ ಸರಪಳಿ ದೂರವನ್ನು ಕ್ರಮಿಸಿ ಸರ್ವೆ ನಂ.10 ಮತ್ತು 4ರ ಸಾಮಾನ್ಯ ಗಡಿಯಲ್ಲಿ ಸಂಧಿಸುತ್ತದೆ.

**ದಕ್ಷಿಣಕ್ಕೆ:** ಪುನ: ಇಲ್ಲಿಂದ ಸೀಮಾರೇಖೆಯು ನೈರುತ್ಯಾಭಿಮುಖವಾಗಿ ಸರ್ವೆ ನಂ.10 ಮತ್ತು 4ರ ಸಾಮಾನ್ಯ ಗಡಿಯಲ್ಲೇ 35ವರೆ ಸರಪಳಿಗಳ ದೂರ ಚಲಿಸಿ ಸರ್ವೆ ನಂ.7,10,4 ಮತ್ತು 6ರ ನಾಲ್ಕುಪ್ಪೆ ಬಾಂದುವಿನಲ್ಲಿ ಸಂಧಿಸುತ್ತದೆ.

**ಪಶ್ಚಿಮಕ್ಕೆ:** ಪುನ: ಇದೇ ಬಿಂದುವಿನಿಂದ ಕ್ರಮವಾಗಿ ಸರ್ವೆ ನಂ. 7ರ ಪೂರ್ವದ ಗಡಿ, 8 ದಕ್ಷಿಣದ ಗಡಿ, 9ರ ದಕ್ಷಿಣ, ಪೂರ್ವ ಮತ್ತು ಉತ್ತರದ ಗಡಿ ಹಾಗೂ 8ರ ಉತ್ತರದ ಗಡಿಗಳನ್ನೇ ಅನುಸರಿಸುತ್ತಾ ನಾಲೆಯ ಎಡದಂಡೆ ಮೇಲಿರುವ ಸರ್ವೆ ನಂ. 14ರ ನೈರುತ್ಯ ಮೂಲೆಯನ್ನು ಸೇರುತ್ತದೆ; ಪುನ: ಇದೇ ಸ್ಥಾನದಿಂದ ಎಡದಂಡೆಯನ್ನೇ ಅನುಸರಿಸುತ್ತಾ ಇದೇ ದಂಡೆಯ ಮೇಲಿರುವ ಸರ್ವೆ ನಂ. 16ರ ನೈರುತ್ಯ ಮೂಲೆಯನ್ನು ಸಂಧಿಸುತ್ತದೆ; ಪುನ: ಇಲ್ಲಿಂದ ಕ್ರಮವಾಗಿ 16, 15, 17, 13 ಮತ್ತು 12ರ ಗಡಿಯನ್ನೇ ಅನುಸರಿಸುತ್ತಾ ಪ್ರಾರಂಭಿಕ ಸ್ಥಾನವನ್ನೇ ಸೇರುತ್ತದೆ.

**ಷರಾ: 1) ಸರ್ವೆ ನಂ. 10 ಕ್ಕೆ**

ನಕ್ಷೆಯಲ್ಲಿ ತೋರಿಸಲಾದ ಒತ್ತುವರಿ 6.32 ಎಕರೆ ಹೊರತು ಪಡಿಸಲಾಗಿದೆ.

**2) ಸ.ನಂ. 14 ಕ್ಕೆ**

ನಕ್ಷೆಯಲ್ಲಿ ತೋರಿಸಲಾದ ಒತ್ತುವರಿ 3.26 ಎಕರೆ ಹೊರತುಪಡಿಸಲಾಗಿದೆ.

**ಗ್ರಾಮ: ಹೊನ್ನೇಕೆರೆ**

ಸರ್ವೆ ನಂ.5-0-17

ಆಕಾರ ಬಂದಿನಂತಿನ ಪೂರ್ಣ ವಿಸ್ತೀರ್ಣ 13.29 ಪೆಟ್ಲಮನೆ ಎಂ.ಎಫ್.ನಲ್ಲಿ ಸೇರ್ಪಡೆಯಾಗಿರುತ್ತದೆ.

**ಸರ್ವೆ ನಂ.44, 45 ಮತ್ತು 50**

**107-34, 138-08, 53-24**

**ಉತ್ತರಕ್ಕೆ:** ಪ್ರಾರಂಭಿಕ ಸ್ಥಾನವು ಇದೇ ಗ್ರಾಮದ ಸರ್ವೆ ನಂ.52 ದಕ್ಷಿಣದ ಮೂಲೆಯಿಂದ ದಕ್ಷಿಣಾಭಿ ಮುಖವಾಗಿ ಸರ್ವೆ ನಂ. 51ರ ಮೂಲಕ ಸುಮಾರು 4ವರೆ ಸರಪಳಿ ಅಂತರದಿಂದ ಇದೇ ಗ್ರಾಮದ ಸರ್ವೆ ನಂ.50 ಮತ್ತು 51ರ ಸಾಮಾನ್ಯ ಗಡಿಯಲ್ಲಿನ ಹಡಗಿನಮಕ್ಕಿ ಮೀಸಲು ಅರಣ್ಯದ ಗಡಿ ಮೂಲೆಗೆ ಹೊಂದಿಕೊಂಡು ಬಿಂದುವಿನಲ್ಲಿ ಸ್ಥಿರವಾಗಿರುತ್ತದೆ; ಇಲ್ಲಿಂದ ಗಡಿರೇಖೆಯು ಈಶಾನ್ಯಾಭಿಮುಖವಾಗಿ ಇದೇ ಸಾಮಾನ್ಯ ಗಡಿಯಲ್ಲಿ 20 ಸರಪಳಿಗಳ ದೂರ ಕ್ರಮಿಸಿ ಸ.ನಂ. 51, 53 ಮತ್ತು 50ರ ಎರಡು ಗುಪ್ಪೆ ಬಾಂದನ್ನು ಸಂಧಿಸುತ್ತದೆ; ಪುನ: ಇಲ್ಲಿಂದ .ನಂ.50ರ ಗಡಿಗೆ ಹೊಂದಿಕೊಂಡ ಸರ್ವೆ ನಂ.53, 83, 9, 10, 11, 12, 49, 48, 89, 47 ಮತ್ತು 16 ಗಡಿಯನ್ನೇ ಅನುಸರಿಸುತ್ತಾ ಸರ್ವೆ ನಂ.44, 50 ಮತ್ತು 16ರ ಮುಕುಪ್ಪೆ ಬಾಂದನ್ನು ಸಂಧಿಸುತ್ತದೆ.

**ಪೂರ್ವಕ್ಕೆ:** ಪುನ: ಇಲ್ಲಿಂದ ಸೀಮಾರೇಖೆಯು ಆಗ್ನೇಯಾಭಿಮುಖವಾಗಿ ಸರ್ವೆ ನಂ. 16ರ ಪಶ್ಚಿಮದ ಗಡಿಯನ್ನೇ ಅನುಸರಿಸುತ್ತಾ 13 ಸರಪಳಿಗಳ ದೂರ ಸರಿದು ಗ್ರಾಮ ಹೇರಂಭಾಪುರದ ಗಡಿಗೆ ಹೊಂದಿಕೊಂಡ ಪೆಟ್ಲಮನೆ ಲಘು ಅರಣ್ಯ ಸೀಮಾರೇಖೆ ಗಡಿಯಲ್ಲಿ ಹೊನ್ನೇಕೇರಿ ಗ್ರಾಮದ ಸರ್ವೆ ನಂ. 16ರ ದಕ್ಷಿಣ ಮೂಲೆಯನ್ನು ಸಂಧಿಸುತ್ತದೆ; ಪುನ: ಇಲ್ಲಿಂದ ದಕ್ಷಿಣಾಭಿಮುಖವಾಗಿ 46 ಸರಪಳಿ ದೂರವನ್ನು ಹೇರಂಭಾಪುರದ ಗಡಿಯನ್ನೇ ಅನುಸರಿಸುತ್ತಾ ಗ್ರಾಮ ಹೊನ್ನೇಕೇರಿ ಸ.ನಂ. 44ರ ಆಗ್ನೇಯ ಮೂಲೆಯನ್ನು ಸಂಧಿಸುತ್ತದೆ. ಪುನ: ಇಲ್ಲಿಂದ ಆಗ್ನೇಯಾಭಿಮುಖವಾಗಿ 7 ಸರಪಳಿಗಳ ದೂರವನ್ನು ಹೇರಂಭಾಪುರದ ಗಡಿಯನ್ನೇ ಅನುಸರಿಸುತ್ತಾ ಇದೇ ಗ್ರಾಮ ಸರ್ವೆ ನಂ. 45ಕ್ಕೆ ಹೊಂದಿಕೊಂಡ ಸಾಮಾನ್ಯ ಗಡಿಯಲ್ಲಿರುವ ಎರಡು ಗುಪ್ಪೆ ಬಾಂದನ್ನು ಸಂಧಿಸುತ್ತದೆ; ಪುನ: ಇಲ್ಲಿಂದ ಆಗ್ನೇಯಾಭಿಮುಖವಾಗಿ ಇದೇ ಸಾಮಾನ್ಯ ಗಡಿಯಲ್ಲಿ 14 ಸರಪಳಿ ದೂರ ಕ್ರಮಿಸಿ ಹಡಗಿನಮಕ್ಕಿ ಮೀಸಲು ಅರಣ್ಯ ಗಡಿಗೆ ಹೊಂದಿಕೊಂಡು 45ನೇ ಸರ್ವೆ ನಂ. ಪೂರ್ವದ ಎರಡು ಗುಪ್ಪೆ ಬಿಂದನ್ನು ಸಂಧಿಸುತ್ತದೆ.

**ದಕ್ಷಿಣಕ್ಕೆ:** ಇಲ್ಲಿಂದ ವಾಯುವ್ಯಾಭಿಮುಖವಾಗಿ ಸರ್ವೆ ನಂ.45 ರ ಮುಖಾಂತರ ಸುಮಾರು 59 ಸರಪಳಿಗಳ ದೂರವನ್ನು ಹಡಗಿನಮಕ್ಕಿ ಮೀಸಲು ಅರಣ್ಯದ ಗಡಿಯನ್ನೇ ಅನುಸರಿಸುತ್ತಾ ಹಡಗಿನಮಕ್ಕಿ ಮೀಸಲು ಅರಣ್ಯದ ಗಡಿಗೆ ಹೊಂದಿಕೊಂಡ ಮೂಲೆ ಗಡಿಯು ಇದೇ ಗ್ರಾಮದ ಸ.ನಂ.46, 44 ಮತ್ತು 45 ಮುಕ್ಕುಪ್ಪೆ ಬಾಂದಿನಲ್ಲಿ ಸಂಧಿಸುತ್ತದೆ.

**ಪಶ್ಚಿಮಕ್ಕೆ:** ಪುನ: ಇಲ್ಲಿಂದ ವಾಯುವ್ಯಾಭಿಮುಖವಾಗಿ ಸರ್ವೆ ನಂ.46 ರ ಪೂರ್ವದ ಗಡಿ (ಹಡಗಿನಮಕ್ಕಿ ಮೀಸಲು ಅರಣ್ಯ) ಯನ್ನು 12 ಸರಪಳಿಗಳ ದೂರ ಕ್ರಮಿಸುತ್ತದೆ. ಪುನ: ಈಶಾನ್ಯಾಭಿಮುಖವಾಗಿ ಸರ್ವೆ ನಂ.44 ರ ಮುಖಾಂತರ ಹಾದುಹೋಗುವ ಇದೇ ಮೀಸಲು ಅರಣ್ಯದ ಗಡಿಯನ್ನೇ ಅನುಸರಿಸುತ್ತಾ 30 ಸರಪಳಿಗಳ ದೂರವನ್ನು ಕ್ರಮಿಸಿ ಇದೇ ಗ್ರಾಮದ ಸರ್ವೆ ನಂ.47ರ ದಕ್ಷಿಣ ಮೂಲೆಯಿಂದ ನೈರುತ್ಯಾಭಿಮುಖವಾಗಿ 7 ಸರಪಳಿಗಳ ಅಂತರದಿಂದ ಸರ್ವೆ ನಂ.50 ಮತ್ತು 14ರ ಸಾಮಾನ್ಯ ಗಡಿಯಲ್ಲಿರುವ ಹಡಗಿನಮಕ್ಕಿ ಮೀಸಲು ಅರಣ್ಯ ಗಡಿಗೆ ಹೊಂದಿಕೊಂಡ ಮೂಲೆ ಎರಡು ಗುಪ್ಪೆ ಬಾಂದಿನಲ್ಲಿ ಸಂಧಿಸುತ್ತದೆ; ಪುನ: ಇಲ್ಲಿಂದ ನೈರುತ್ಯಾಭಿಮುಖವಾಗಿ ಸರ್ವೆ ನಂ. 44 ಮತ್ತು 50ರ ಸಾಮಾನ್ಯ ಗಡಿಗೆ ಹೊಂದಿಕೊಂಡು ಹಡಗಿನಮಕ್ಕಿ ಮೀಸಲು ಅರಣ್ಯದ ಗಡಿಯನ್ನೇ ಅನುಸರಿಸುತ್ತಾ ಸುಮಾರು 28 ಸರಪಳಿಗಳ ದೂರ ಕ್ರಮಿಸಿ ಸರ್ವೆ ನಂ. 46, 50 ಮತ್ತು 44 ಇವುಗಳು ಹಡಗಿನಮಕ್ಕಿ ಗ್ರಾಮದ ಸಾಮಾನ್ಯ ಗಡಿಯಲ್ಲಿ ಕೂಡುವ ನಾಲ್ಕುಪ್ಪೆ ಬಾಂದಿನಲ್ಲಿ ಸಂಧಿಸುತ್ತದೆ. ಪುನ: ಇದೇ ಸ್ಥಾನದಿಂದ ಸರ್ವೆ ನಂ. 50ರ ಮೂಲಕ ಹಾದು ಹೋಗುವ ಹಡಗಿನಮಕ್ಕಿ ಮೀಸಲು ಅರಣ್ಯದ ಗಡಿಯನ್ನೇ ಅನುಸರಿಸುತ್ತಾ ಸುಮಾರು 42 ವರೆ ಸರಪಳಿ ದೂರ ಕ್ರಮಿಸಿ ಸರ್ವೆ ನಂ. 89ರ ವಾಯುವ್ಯ ಮೂಲೆಯನ್ನು ಸಂಧಿಸುತ್ತದೆ. ಪುನ: ಇಲ್ಲಿಂದ ಈಶಾನ್ಯಾಭಿಮುಖವಾಗಿ ಸರ್ವೆ ನಂ.50ರ ಮೂಲಕ ಹಾದು ಹೋಗುವ ಇದೇ ಮೀಸಲು ಅರಣ್ಯದ ಗಡಿರೇಖೆಯಲ್ಲೇ ಸುಮಾರು 13 ಸರಪಳಿಗಳ ದೂರ ಕ್ರಮಿಸಿ ಪ್ರಾರಂಭಿಕ ಸ್ಥಾನವನ್ನು ಸೇರುತ್ತದೆ.

**ಷರಾ: 1) ಸರ್ವೆ ನಂ. 44**

ಅ) ಹಿಡುವಳಿ ಸ.ನಂ.ಗಳಾದ 24 ರಿಂದ 43 ಮತ್ತು 84, 85 ಮತ್ತು 87 ಇವುಗಳನ್ನು ಹೊರತುಪಡಿಸಲಾಗಿದೆ.

ಆ) ನಕ್ಷೆಯಲ್ಲಿ ಗುರುತಿಸಲಾದ ಒತ್ತುವರಿ 10.04 ಎಕರೆ ಹೊರತುಪಡಿಸಲಾಗಿದೆ.

2) ಸ.ನಂ. 50

ಅ) ನಕ್ಷೆಯಲ್ಲಿ ಗುರುತು ಮಾಡಲಾದ ಒತ್ತುವರಿ 1.24 ಎಕರೆ ಹೊರತುಪಡಿಸಲಾಗಿದೆ.

ಸ.ನಂ. 66 – 25.39

**ಉತ್ತರಕ್ಕೆ:** ಪ್ರಾರಂಭಿಕ ಸ್ಥಾನವು, ಆಲಮನೆ ಗ್ರಾಮದ ಸ.ನಂ. 22, ಹೊನ್ನೇಕೇರಿ ಗ್ರಾಮದ ಸ.ನಂ.66 ಮತ್ತು 67 ಇವುಗಳು ಕ್ರಮವಾದ ಈ ಎರಡು ಗ್ರಾಮಗಳ ಸಾಮಾನ್ಯ ಸರಹದ್ದಿನ ಮೇಲೆ ನಾಲೆಯ ಎಡದಂಡೆ ಪಕ್ಕದಲ್ಲಿ ಕೂಡುವ ಮುಕ್ಕುಪ್ಪೆ ಬಾಂದಿನಿಂದ ಸ್ಥಿರವಾಗಿದ್ದು, ಸೀಮಾರೇಖೆಯು ಆಗ್ನೇಯಾಭಿಮುಖವಾಗಿ ಸರ್ವೆ ನಂ.66 ಮತ್ತು 67 ಕ್ಕೆ ಹೊಂದಿಕೊಂಡ ಸಾಮಾನ್ಯ ಗಡಿಯಲ್ಲೇ ಸುಮಾರು 13ವರೆ ಸರಪಳಿ ದೂರ ಕ್ರಮಿಸಿ ಇದೇ ಸಾಮಾನ್ಯ ಗಡಿಯಲ್ಲಿ ಸ.ನಂ.66, 67 ಮತ್ತು 65 ರ ಮುಕ್ಕುಪ್ಪೆ ಬಾಂದಿನಲ್ಲಿ ಸಂಧಿಸುತ್ತದೆ.

**ಪೂರ್ವಕ್ಕೆ:** ಪುನ: ಇದೇ ಸ್ಥಾನದಿಂದ ಆಗ್ನೇಯಾಭಿಮುಖವಾಗಿ ಸುಮಾರು 16 ಸರಪಳಿಗಳ ದೂರವನ್ನು 65 ಮತ್ತು 64 ಕ್ಕೆ ಹೊಂದಿಕೊಂಡ ಸಾಮಾನ್ಯ ಗಡಿಯಲ್ಲೇ ಚಲಿಸಿ ಸ.ನಂ. 66, 64 ಮತ್ತು 62 ಇವುಗಳು ಸಂಧಿಸುವ ಬಿಂದುವಿನಲ್ಲಿ ಸೇರುತ್ತದೆ.

**ದಕ್ಷಿಣಕ್ಕೆ:** ಪುನ: ಇದೇ ಸ್ಥಾನದಿಂದ ನೈರುತ್ಯಾಭಿಮುಖವಾಗಿ ಸುಮಾರು 23 ಸರಪಳಿಗಳ ದೂರವನ್ನು ಸರ್ವೆ ನಂ. 55 ಕ್ಕೆ ಹೊಂದಿಕೊಂಡ ಸಾಮಾನ್ಯ ಗಡಿಯಲ್ಲೇ ಚಲಿಸಿ ಹಡಗಿನಮಕ್ಕಿ ಮೀಸಲು ಅರಣ್ಯದ ಗಡಿಯ ಇದೇ ಸಾಮಾನ್ಯ ಗಡಿಯಲ್ಲಿ ಸೇರುವ ಬಿಂದುವಿನಲ್ಲಿ ಸಂಧಿಸುತ್ತದೆ.

**ಪಶ್ಚಿಮಕ್ಕೆ:** ಪುನ: ಇದೇ ಸ್ಥಾನದಿಂದ ಉತ್ತರಾಭಿಮುಖವಾಗಿ ಸುಮಾರು 11 ಸರಪಳಿ ದೂರವನ್ನು ಸ.ನಂ. 66ರ ಮೂಲಕ ಹಾದು ಹೋಗುವ ಹಡಗಿನಮಕ್ಕಿ ಮೀಸಲು ಅರಣ್ಯದ ಸೀಮಾರೇಖೆಯಲ್ಲೇ ಚಲಿಸಿ ಆಲಮನೆ ಗ್ರಾಮದ ಸ.ನಂ. 22 ಮತ್ತು 23 ಹಾಗೂ ಹೊನ್ನೇಕೇರಿ ಗ್ರಾಮದ ಸ.ನಂ. 66 ಇವುಗಳು ಇದೇ ಗ್ರಾಮಗಳ ಸಾಮಾನ್ಯ ಸರಹದ್ದಿನಲ್ಲಿ ಹಾಗೂ ಹಡಗಿನಮಕ್ಕಿ ಮೀಸಲು ಅರಣ್ಯ ಮೂಲೆ ಕೂಡು ಬಿಂದುವಿನಲ್ಲಿ ಸೇರುತ್ತದೆ. ಪುನ: ಇಲ್ಲಿಂದ ಇದೇ ಗ್ರಾಮಗಳ ಸಾಮಾನ್ಯ ಸರಹದ್ದಿನಲ್ಲಿ ಸುಮಾರು 14 ಸರಪಳಿ ದೂರ ಚಲಿಸಿ ಪ್ರಾರಂಭಿಕ ಸ್ಥಾನವನ್ನು ಸೇರುತ್ತದೆ.

**ಷರಾ**

ನಕ್ಷೆಯಲ್ಲಿ ಗುರುತು ಮಾಡಲಾದ ಒತ್ತುವರಿ 12-11 ಎಕರೆ ಹೊರತುಪಡಿಸಲಾಗಿದೆ.

**ಗ್ರಾಮ: ಇಂಗ್ಲಾಡಿ**

**ಸ.ನಂ.13 ಮತ್ತು ಬಿಟ್-111**

**ಉತ್ತರಕ್ಕೆ:** ಪ್ರಾರಂಭಿಕ ಸ್ಥಾನವು ಇದೇ ಗ್ರಾಮದ ಸ.ನಂ.12 ಮತ್ತು 13ಕ್ಕೆ ಹೊಂದಿಕೊಂಡ ಸಾಮಾನ್ಯ ಗಡಿರೇಖೆಯಲ್ಲಿ, ಸ.ನಂ.12, 13, 31 ಮತ್ತು 5ರ ನಾಲ್ಗುಪ್ಪೆ ಬಾಂದಿನಿಂದ ಈಶಾನ್ಯಾಭಿಮುಖವಾಗಿ ಸುಮಾರು 10 ಸರಪಳಿ ಅಂತರದಿಂದ ಇಂಗ್ಲಾಡಿ ಲಘು ಅರಣ್ಯದ ಗಡಿ ರೇಖೆಯಲ್ಲಿನ ಬಿಂದುವಿನಲ್ಲಿ ಸ್ಥಿರವಾಗಿರುತ್ತದೆ; ಇಲ್ಲಿಂದ ಗಡಿರೇಖೆಯು ಪೂರ್ವಾಭಿಮುಖವಾಗಿ ಸ.ನಂ. 13ರ ಮುಖಾಂತರ 10 ಸರಪಳಿಗಳ ದೂರ ಇದೇ ಲಘು ಅರಣ್ಯ ಗಡಿಯಲ್ಲೇ ಕ್ರಮಿಸಿ ಸ.ನಂ. 30ರ ನೈರುತ್ಯ ಮೂಲೆಯನ್ನು ಸೇರುತ್ತದೆ. ಪುನ: ಇದೇ ಸ್ಥಾನದಿಂದ ಸ.ನಂ. 13ಕ್ಕೆ ಹೊಂದಿಕೊಂಡ ಸ.ನಂ. 37, 30, 38, 28ರ ಸಾಮಾನ್ಯ ಗಡಿಯಲ್ಲೇ ಚಲಿಸುತ್ತಾ ಸ.ನಂ. 28ರ ಆಗ್ನೇಯ ಮೂಲೆ ಮತ್ತು ಸಾಲಗಡಿ ಲಘು ಅರಣ್ಯಕ್ಕೆ ಹೊಂದಿಕೊಂಡ ಮೂಲೆಯಲ್ಲಿ ಸಂಧಿಸುತ್ತದೆ. ಪುನ: ಇಲ್ಲಿಂದ ಸ.ನಂ. 13ರ ಮೂಲಕ ಹಾದು ಹೋಗುವ ಸಾಲಗಡಿ ಲಘು ಅರಣ್ಯದ ಗಡಿರೇಖೆಯಲ್ಲೇ ಸುಮಾರು 5 ಸರಪಳಿಗಳ ದೂರವನ್ನು ಈಶಾನ್ಯಾಭಿಮುಖವಾಗಿ ಚಲಿಸಿ,ಆಲಮನೆ ಗ್ರಾಮ ಮತ್ತು ಇಂಗ್ಲಾಡಿ ಗ್ರಾಮಗಳ ಸಾಮಾನ್ಯ ಸರಹದ್ದಿನಲ್ಲಿ ಸಂಧಿಸುತ್ತದೆ.

**ಪೂರ್ವಕ್ಕೆ:** ಪುನ: ಇಲ್ಲಿಂದ ದಕ್ಷಿಣಾಭಿಮುಖವಾಗಿ ಇದೇ ಗ್ರಾಮಗಳ ಸಾಮಾನ್ಯ ಸರಹದ್ದಿನಲ್ಲೇ ಸುಮಾರು 6 ಸರಪಳಿಗಳ ದೂರ ಕ್ರಮಿಸಿ ಹಡಗಿನಮಕ್ಕಿ ಮೀಸಲು ಅರಣ್ಯದ ಗಡಿಯಲ್ಲಿನ ಬಿಂದುವಿನಲ್ಲಿ ಸಂಧಿಸುತ್ತದೆ. ಪುನ: ಇದೇ ಸ್ಥಾನದಿಂದ ನೈರುತ್ಯಾಭಿಮುಖವಾಗಿ ಸ.ನಂ. 13 ರ ಮುಖಾಂತರ ಹಾದು ಹೋಗುವ ಹಡಗಿನಮಕ್ಕಿ ಮೀಸಲು ಅರಣ್ಯ ಗಡಿ ರೇಖೆಯಲ್ಲೇ ಸುಮಾರು 16 ಸರಪಳಿ ದೂರ ಕ್ರಮಿಸಿ ಮತ್ತೆ ಆಗ್ನೇಯಾಭಿಮುಖವಾಗಿ ಸ.ನಂ. 13 ಮತ್ತು 31ರ ಮೂಲಕ ಹಾದು ಹೋಗುವ ಇದೇ ಅರಣ್ಯದ ಸೀಮಾರೇಖೆಯಲ್ಲೇ ಸುಮಾರು 36 ಸರಪಳಿಗಳ ದೂರ ಕ್ರಮಿಸಿ ಹಡಗಿನಮಕ್ಕಿ ಗ್ರಾಮ ಮತ್ತು ಇಂಗ್ಲಾಡಿ ಗ್ರಾಮಗಳ ಸಾಮಾನ್ಯ ಸರಹದ್ದಿನಲ್ಲಿ ಸಂಧಿಸುತ್ತದೆ.

**ದಕ್ಷಿಣಕ್ಕೆ:** ಪುನ: ಇದೇ ಸ್ಥಾನದಿಂದ ಸೀಮಾರೇಖೆಯು ನೈರುತ್ಯಾಭಿಮುಖವಾಗಿ ಇದೇ ಗ್ರಾಮಗಳ ಸರಹದ್ದಿನಲ್ಲೇ ಸುಮಾರು 10 ಸರಪಳಿಗಳ ದೂರ ಕ್ರಮಿಸಿ ಸ.ನಂ.1 ಮತ್ತು 31 ಕೂಡು ಬಾಂದುವಿನಲ್ಲಿ ಸಂಧಿಸುತ್ತದೆ.

**ಪಶ್ಚಿಮಕ್ಕೆ:** ಪುನ: ಇದೇ ಸ್ಥಾನದಿಂದ ವಾಯುವ್ಯಾಭಿಮುಖವಾಗಿ ಸ.ನಂ.31 ಕ್ಕೆ ಹೊಂದಿಕೊಂಡ ಸ.ನಂ. 1 ಮತ್ತು 5 ರ ಸಾಮಾನ್ಯ ಗಡಿಯಲ್ಲೇ ಕ್ರಮವಾಗಿ ಸುಮಾರು 20 ಮತ್ತು 16 ಸರಪಳಿಗಳ ದೂರ ಸಾಗಿ ಸ.ನಂ.12, 13, 31 ಮತ್ತು 5ರ ಸಾಲ್ಗುಪ್ಪೆ ಬಾಂದನ್ನು ಸಂಧಿಸುತ್ತದೆ.ಪುನ:ಈ ಸ್ಥಾನದಿಂದ ವಾಯುವ್ಯಾಭಿಮುಖವಾಗಿ ಸ.ನಂ. 12 ಮತ್ತು 13ರ ಸಾಮಾನ್ಯ ಗಡಿಯಲ್ಲೇ ಚಲಿಸಿ ಪ್ರಾರಂಭಿಕ ಸ್ಥಾನವನ್ನು ಸೇರುತ್ತದೆ.

**ಸ.ನಂ.13 ಬಿಟ್- Iಕ್ಕೆ**

**ಉತ್ತರಕ್ಕೆ:** ಪ್ರಾರಂಭಿಕ ಸ್ಥಾನವು ಸ.ನಂ. 25ರ ಉತ್ತರ ಮೂಲೆಯಲ್ಲಿ ಸ್ಥಿರವಾಗಿರುತ್ತದೆ.

**ಪೂರ್ವ ಮತ್ತು ದಕ್ಷಿಣಕ್ಕೆ:** ಇದೇ ಸ್ಥಾನದಿಂದ ಸ.ನಂ.13ಕ್ಕೆ ಹೊಂದಿಕೊಂಡ ಸಾಮಾನ್ಯ ಗಡಿ ಸ.ನಂ.25, 26 ಮತ್ತು 14ರ ಗಡಿಯನ್ನೇ ಅನುಸರಿಸುತ್ತಾ ಸ.ನಂ.14 ರ ವಾಯುವ್ಯ ಮೂಲೆಯನ್ನು ಸಂಧಿಸುತ್ತದೆ.

**ಪಶ್ಚಿಮಕ್ಕೆ:** ಪುನ:ಇಲ್ಲಿಂದ ಈಶಾನ್ಯಾಭಿಮುಖವಾಗಿ ಸ.ನಂ.13ರ ಮೂಲಕ ಹಾದು ಹೋಗುವ ಇಂಗ್ಲಾಡಿ ಲಘು ಅರಣ್ಯದ ಸೀಮಾರೇಖೆಯಲ್ಲೇ ಸುಮಾರು 36 ಸರಪಳಿ ದೂರ ಕ್ರಮಿಸಿ ಪ್ರಾರಂಭದ ಸ್ಥಾನವನ್ನು ಸೇರುತ್ತದೆ.

**ಸ.ನಂ. 14 ಬಿಟ್–II**

**ಉತ್ತರಕ್ಕೆ:** ಪ್ರಾರಂಭಿಕ ಸ್ಥಾನವು ಸ.ನಂ.25ರ ಈಶಾನ್ಯ ಮೂಲೆ, ಸಾಲಗಡಿ ಲಘು ಅರಣ್ಯದ ಸೀಮಾರೇಖೆಯಲ್ಲಿ ಸ್ಥಿರವಾಗಿರುತ್ತದೆ.

**ಪೂರ್ವಕ್ಕೆ:** ಇದೇ ಸ್ಥಾನದಿಂದ ಸ.ನಂ.13ರ ಮುಖಾಂತರ ಹಾದುಹೋಗುವ ಸಾಲಗಡಿ ಲಘು ಅರಣ್ಯ ಸೀಮಾರೇಖೆಯಲ್ಲಿ ಕ್ರಮವಾಗಿ ಸುಮಾರು 7 ಮತ್ತು 27 ಸರಪಳಿ ದೂರವನ್ನು ನೈರುತ್ಯ ಮತ್ತು ಆಗ್ನೇಯಾಭಿಮುಖವಾಗಿ ಚಲಿಸಿ ಸ.ನಂ. 28ರ ಆಗ್ನೇಯ ಮೂಲೆಯನ್ನು ಸೇರುತ್ತದೆ.

**ದಕ್ಷಿಣ–ಪಶ್ಚಿಮಕ್ಕೆ:** ಪುನ: ಇಲ್ಲಿಂದ ಉತ್ತರಾಭಿಮುಖವಾಗಿ ಸ.ನಂ. 13 ಕ್ಕೆ ಹೊಂದಿಕೊಂಡ ಸ.ನಂ. 28, 27, 26 ಮತ್ತು 25ರ ಸಾಮಾನ್ಯ ಗಡಿಯಲ್ಲೇ ಚಲಿಸಿ ಪ್ರಾರಂಭಿಕ ಸ್ಥಾನವನ್ನು ಸೇರುತ್ತದೆ

**ಸ.ನಂ. 13 – ಬಿಟ್– IV**

**ಉತ್ತರಕ್ಕೆ:** ಪ್ರಾರಂಭಿಕ ಸ್ಥಾನವು ಸ.ನಂ. 14ರ ಆಗ್ನೇಯ ಮೂಲೆಯಲ್ಲಿ ಸ್ಥಿರವಾಗಿರುತ್ತದೆ. ಇಲ್ಲಿಂದ ಪೂರ್ವಾಭಿಮುಖವಾಗಿ ಸ.ನಂ. 26ರ ದಕ್ಷಿಣದ ಗಡಿಯನ್ನೇ ಅನುಸರಿಸುತ್ತಾ ಇದೇ ಸ.ನಂ. ಆಗ್ನೇಯ ಮೂಲೆಯನ್ನು ಸಂಧಿಸುತ್ತದೆ.

**ಪೂರ್ವಕ್ಕೆ:** ಇದೇ ಸ್ಥಾನದಿಂದ ಸ.ನಂ. 27ರ ಪಶ್ಚಿಮದ ಗಡಿಯಲ್ಲೇ ಚಲಿಸಿ ಸ.ನಂ.29ರ ಗಡಿಯನ್ನೇ ಸುತ್ತುವರಿದು, ಸ.ನಂ. 27 ನೈರುತ್ಯ ಮೇರೆಗೆ ಹೊಂದಿಕೊಂಡ ಸ.ನಂ.28 ರ ವಾಯುವ್ಯ ಮೂಲೆಯನ್ನು ಸೇರುತ್ತದೆ. ಪುನ: ಇದೇ ಸ್ಥಾನದಿಂದ ಸ.ನಂ. 13ಕ್ಕೆ ಹೊಂದಿಕೊಂಡ ಸಾಮಾನ್ಯ ಗಡಿ ಸ.ನಂ. 28ರ ಪಶ್ಚಿಮದ ಗಡಿ, 38ರ ಉತ್ತರದ ಗಡಿಯನ್ನೇ ಅನುಸರಿಸುತ್ತಾ ಸ.ನಂ. 30ರ ಉತ್ತರದ ಮೂಲೆ ಇಂಗ್ಲಾಡಿ ಲಘು ಅರಣ್ಯಕ್ಕೆ ಹೊಂದಿಕೊಂಡ ಗಡಿ ಮೂಲೆಯಲ್ಲಿ ಸಂಧಿಸುತ್ತದೆ.

**ದಕ್ಷಿಣಕ್ಕೆ:** ಪುನ: ಇಲ್ಲಿಂದ ಸ.ನಂ. 13ರ ಮೂಲಕ ಹಾದುಹೋಗುವ ಇಂಗ್ಲಾಡಿ ಲಘು ಅರಣ್ಯ ಗಡಿಯಲ್ಲೇ ಸುಮಾರು 29 ಸರಪಳಿ ದೂರವಾಗಿ ಸ.ನಂ. 14ರ ನೈರುತ್ಯ ಮೂಲೆಯನ್ನು ಸಂಧಿಸುತ್ತದೆ.

**ಪಶ್ಚಿಮಕ್ಕೆ:** ಪುನ: ಇದೇ ಸ್ಥಾನದಿಂದ ಸ.ನಂ.14ರ ದಕ್ಷಿಣದ ಗಡಿಯಲ್ಲೇ ಚಲಿಸಿ ಪ್ರಾರಂಭಿಕ ಸ್ಥಾನವನ್ನು ಸೇರುತ್ತದೆ.

**ಷರಾ: ಸ.ನಂ.–13**

ನಕ್ಷೆಯಲ್ಲಿ ಗುರುತು ಮಾಡಲಾದ ಒತ್ತುವರಿ 6–11 ಎಕರೆ ಹೊರತುಪಡಿಸಲಾಗಿದೆ.

**ಗ್ರಾಮ: ಕೀರಣಕೆರೆ**

**ಸ.ನಂ. 10– ಬಿಟ್–I**

**ಉತ್ತರಕ್ಕೆ:** ಪ್ರಾರಂಭಿಕ ಸ್ಥಾನವು ಇದೇ ಗ್ರಾಮದ ಸ.ನಂ.10 ಮತ್ತು 77 ಇವುಗಳಿಗೆ ಹೊಂದಿಕೊಂಡ ಸಾಮಾನ್ಯ ಗಡಿಯಲ್ಲಿ ಸ.ನಂ. 77 ರ ನೈರುತ್ಯ ಮೂಲೆಯಿಂದ ಪೂರ್ವಾಭಿಮುಖವಾಗಿ ಸುಮಾರು 7ವರೆ ಸರಪಳಿಗಳ ಅಂತರದಿಂದ ಇದೇ ಸಾಮಾನ್ಯ ಗಡಿಯಲ್ಲಿನ ಬಿಂದುವಿನಲ್ಲಿ ಹಾದು ಹೋಗುವ ಹಡಗಿನಮಕ್ಕಿ ಮೀಸಲು ಅರಣ್ಯದ ಗಡಿ ಬಿಂದುವಿನಲ್ಲಿ ಸ್ಥಿರವಾಗಿರುತ್ತದೆ. ಇಲ್ಲಿಂದ ಪೂರ್ವಾಭಿಮುಖವಾಗಿ ಸ.ನಂ.77 ಮತ್ತು 10ರ ಸಾಮಾನ್ಯ ಗಡಿಯಲ್ಲೇ ಸುಮಾರು 5 ಸರಪಳಿಗಳ ದೂರ ಚಲಿಸಿ ಸ.ನಂ.77, 9 ಮತ್ತು 10 ಕ್ಕೆ ಹೊಂದಿಕೊಂಡ ಸರ್ವೆ ನಂ. 9, 8, 6 ಮತ್ತು 2 ಇವುಗಳ ಸಾಮಾನ್ಯ ಗಡಿಯಲ್ಲೇ ಚಲಿಸಿ ಸ.ನಂ. 1, 2 ಮತ್ತು 10 ಇವುಗಳು ಕೂಡುವ ಸ್ಥಾನವನ್ನು ತಲುಪುತ್ತದೆ.

**ಪೂರ್ವಕ್ಕೆ:** ಇದೇ ಸ್ಥಾನದಿಂದ ಕ್ರಮವಾಗಿ ಆಗ್ನೇಯ ಮತ್ತು ನೈರುತ್ಯಾಭಿಮುಖವಾಗಿ ಸುಮಾರು 5ವರೆ ಮತ್ತು 6ವರೆ ಸರಪಳಿಗಳ ದೂರವನ್ನು ಸ.ನಂ. 10 ಕ್ಕೆ ಹೊಂದಿಕೊಂಡ ಸ.ನಂ.1, ಊರು ಮತ್ತು 65ರ ಸಾಮಾನ್ಯ ಗಡಿಗಳಲ್ಲೇ ಚಲಿಸಿ ಸ.ನಂ. 10, 65 ಮತ್ತು 37ರ ಕೂಡು ಬಾಂದನ್ನು ತಲುಪುತ್ತದೆ.

**ದಕ್ಷಿಣ ಮತ್ತು ಪಶ್ಚಿಮಕ್ಕೆ:** ಪುನ: ಇಲ್ಲಿಂದ ಕ್ರಮವಾಗಿ ಕೀರಣಕೆರೆ ಆರ್.ಎಫ್. ಮತ್ತು ಹಡಗಿನಮಕ್ಕಿ ಮೀಸಲು ಅರಣ್ಯದ ಗಡಿ ವಿವರಣೆಯಂತೆ ಸದರಿ ಅರಣ್ಯದ ಸರಹದ್ದನ್ನೇ ಅನುಸರಿಸುತ್ತಾ ಪ್ರಾರಂಭಿಕ ಸ್ಥಾನವನ್ನು ಸೇರುತ್ತದೆ.

**ಸ.ನಂ. 10 –ಬಿಟ್ II**

**ಉತ್ತರಕ್ಕೆ:** ಪ್ರಾರಂಭಿಕ ಸ್ಥಾನವು ಸ.ನಂ.10ರ ದಕ್ಷಿಣ ಮೂಲೆಯಿಂದ ಈ ಸ.ನಂ.ಗೆ ಹೊಂದಿಕೊಂಡ ಬೆಕ್ಕನೂರು ಗ್ರಾಮದ ಸ.ನಂ.12ರ ಆಗ್ನೇಯ ಮೂಲೆಗೆ ಹೊಂದಿಕೊಂಡು ವಾಯುವ್ಯಾಭಿಮುಖವಾಗಿ ಇದೇ ಸಾಮಾನ್ಯ ಗಡಿಯಲ್ಲಿ 11 ಸರಪಳಿ ಅಂತರದಿಂದ ಇರುವ ಬಿಂದುವಿನಲ್ಲಿ ಸ್ಥಿರವಾಗಿರುತ್ತದೆ. ಈ ಸ್ಥಾನದಿಂದ ಈಶಾನ್ಯಭಿಮುಖವಾಗಿ ಸ.ನಂ.10ರ ಮುಖಾಂತರ ಸುಮಾರು 15ವರೆ ಸರಪಳಿ ದೂರವನ್ನು ಹಡಗಿನಮಕ್ಕಿ ಮೀಸಲು ಅರಣ್ಯದ ಗಡಿ ವಿವರಣೆಯಂತೆ ಇದೇ ಗಡಿಯಲ್ಲಿ ಚಲಿಸಿ ಸ.ನಂ. 10 ಮತ್ತು 37 ರ ಸಾಮಾನ್ಯ ಗಡಿಯಲ್ಲಿನ ಕೀರಣಕೆರೆ ಆರ್.ಎಫ್.ಗಡಿಯ ಬಿಂದುವಿನಲ್ಲಿ ಸಂಧಿಸುತ್ತದೆ.

**ಪೂರ್ವಕ್ಕೆ:** ಪುನ: ಇಲ್ಲಿಂದ ನೈರುತ್ಯಾಭಿಮುಖವಾಗಿ ಸುಮಾರು 15 ಸರಪಳಿ ದೂರವನ್ನು ಇದೇ ಸಹ ಗಡಿಯಲ್ಲೇ ಕೀರಣಕೆರೆ ಆರ್.ಎಫ್.ಗಡಿ ವಿವರಣೆಯಂತೆ ಕ್ರಮಿಸಿ ಸ.ನಂ. 10 ಮತ್ತು 37ರ ಕೂಡು ಬಾಂದನ್ನು ಕೊಪ್ಪ ತಾಲ್ಲೂಕು, ಹಿರೇಕೊಡುಗೆ ಗ್ರಾಮದ ಗಡಿಯಲ್ಲಿ ಸಂಧಿಸುತ್ತದೆ.

**ದಕ್ಷಿಣಕ್ಕೆ:** ಪುನ: ಇಲ್ಲಿಂದ ನೈರುತ್ಯಾಭಿಮುಖವಾಗಿ ಸುಮಾರು 5 ಸರಪಳಿಗಳ ದೂರವನ್ನು ಹಿರೇಕೊಡುಗೆ ಮತ್ತು ಸ.ನಂ. 10 ಕ್ಕೆ ಹೊಂದಿಕೊಂಡ ಸಾಮಾನ್ಯ ಗಡಿಯಲ್ಲೇ ಚಲಿಸಿ ಸ.ನಂ. 10ರ ದಕ್ಷಿಣ ಮೂಲೆಯನ್ನು ಸಂಧಿಸುತ್ತದೆ.

**ಪಶ್ಚಿಮಕ್ಕೆ:** ಪುನ: ಇಲ್ಲಿಂದ ವಾಯುವ್ಯಾಭಿಮುಖವಾಗಿ 11 ಸರಪಳಿ ದೂರವನ್ನು ಬೆಕ್ಕನೂರು ಗ್ರಾಮದ ಗಡಿಯಲ್ಲೇ ಚಲಿಸಿ ಪ್ರಾರಂಭಿಕ ಸ್ಥಾನವನ್ನು ಸೇರುತ್ತದೆ.

### ಸ.ನಂ. 37– ಬಿಟ್–I

**ಉತ್ತರಕ್ಕೆ:** ಪ್ರಾರಂಭಿಕ ಸ್ಥಾನವು ಸ.ನಂ. 64, 63, 37, 65 ಮತ್ತು ಊರು ಇವುಗಳು ಕೂಡುವ ಸ್ಥಾನದಲ್ಲಿ ಸ್ಥಿರವಾಗಿರುತ್ತದೆ.

**ಪೂರ್ವಕ್ಕೆ:** ಈ ಸ್ಥಾನದಿಂದ ಸ.ನಂ.37 ಕ್ಕೆ ಹೊಂದಿಕೊಂಡ ಸ.ನಂ. 64, 63, 51, 50, 48, 48–49 (ಕೆರೆ) ಕ್ಕೆ ಹೊಂದಿಕೊಂಡ ಸಹ ಗಡಿ ಮತ್ತು 66 ಇವುಗಳ ಸಾಮಾನ್ಯ ಗಡಿಯಲ್ಲೇ ಚಲಿಸಿ ಸ.ನಂ.66ರ ನೈರುತ್ಯ ಮೂಲೆಯನ್ನು ಸೇರುತ್ತದೆ.

**ದಕ್ಷಿಣ–ಪಶ್ಚಿಮಕ್ಕೆ:** ಪುನ: ಇಲ್ಲಿಂದ ಸ.ನಂ. 37ರ ಮೂಲಕ ಹಾದುಹೋಗುವ ಕೀರಣಕೆರೆ ಆರ್.ಎಫ್.ಗಡಿ ವಿವರಣೆಯಂತೆ ಇದೇ ಗಡಿಯಲ್ಲಿ ವಾಯುವ್ಯಾಭಿಮುಖವಾಗಿ ಸುಮಾರು 20 ಸರಪಳಿ ದೂರವನ್ನು ಚಲಿಸಿ ಸ.ನಂ. 49ರ ಕೆರೆಯ ನೈರುತ್ಯ ಮೂಲೆಯನ್ನು ಸಂಧಿಸುತ್ತದೆ. ಪುನ: ಇಲ್ಲಿಂದ ಉತ್ತರಾಭಿಮುಖವಾಗಿ ಇದೇ ಮೀಸಲು ಅರಣ್ಯ ಗಡಿ ವಿವರಣೆಯಂತೆ ಇದೇ ಸರಹದ್ದಿನಲ್ಲಿ ಸುಮಾರು 15 ಸರಪಳಿ ದೂರ ಚಲಿಸಿ ಸ.ನಂ. 65ರ ಆಗ್ನೇಯ ಮೂಲೆಯನ್ನು ಸೇರುತ್ತದೆ. ಪುನ: ಇಲ್ಲಿಂದ ಸ.ನಂ. 65ರ ಪೂರ್ವದ ಗಡಿಯನ್ನೇ ಅನುಸರಿಸುತ್ತಾ ಸುಮಾರು 19 ಸರಪಳಿ ದೂರ ಸಾಗಿ ಪ್ರಾರಂಭಿಕ ಸ್ಥಾನವನ್ನು ಸೇರುತ್ತದೆ.

### ಸ.ನಂ. 37 – ಬಿಟ್–II

**ಉತ್ತರಕ್ಕೆ:** ಪ್ರಾರಂಭಿಕ ಸ್ಥಾನವು ಸ.ನಂ. 43, 44 ಮತ್ತು 37ರ ಕೂಡು ಬಾಂದುವಿನಲ್ಲಿ ಸ್ಥಿರವಾಗಿರುತ್ತದೆ. ಇಲ್ಲಿಂದ ಸ.ನಂ. 37 ಕ್ಕೆ ಹೊಂದಿಕೊಂಡ ಸ.ನಂ. 44, 56 ಮತ್ತು 57ರ ಸಾಮಾನ್ಯ ಗಡಿಯಲ್ಲೇ ಚಲಿಸಿ ಸ.ನಂ. 57 ಆಗ್ನೇಯ ಮೂಲೆಯನ್ನು ಸೇರುತ್ತದೆ.

**ಪೂರ್ವ–ದಕ್ಷಿಣಕ್ಕೆ:** ಪುನ: ಇಲ್ಲಿಂದ ಸ.ನಂ. 37 ರಲ್ಲಿ ಹಾದು ಹೋಗುವ ಕೀರಣಕೆರೆ ಆರ್.ಎಫ್.ಗಡಿ ವಿವರಣೆಯಂತೆ ಇದೇ ಸೀಮಾರೇಖೆಯನ್ನು ಅನುಸರಿಸುತ್ತಾ ಸ.ನಂ. 66ರ ನೈರುತ್ಯ ಮೂಲೆಯನ್ನು ಸಂಧಿಸುತ್ತದೆ.

**ಪಶ್ಚಿಮಕ್ಕೆ:** ಇಲ್ಲಿಂದ ಸ.ನಂ. 37 ಕ್ಕೆ ಹೊಂದಿಕೊಂಡ ಸ.ನಂ. 66, 41, 40, 38, 39 ಮತ್ತು 43 ಇವುಗಳ ಸಾಮಾನ್ಯ ಗಡಿಯಲ್ಲೇ ಚಲಿಸಿ ಪ್ರಾರಂಭಿಕ ಸ್ಥಾನವನ್ನು ಸೇರುತ್ತದೆ.

**ಷರಾ: 1) ಸ.ನಂ. 10**

ಅ) ನಕ್ಷೆಯಲ್ಲಿ ಗುರುತಿಸಲಾದ ಒತ್ತುವರಿ 3–35 ಎಕರೆ ಹೊರತುಪಡಿಸಲಾಗಿದೆ.

**ಷರಾ: 2) ಸ.ನಂ.37**

ಆ) ನಕ್ಷೆಯಲ್ಲಿ ಗುರುತು ಮಾಡಿದ ಒತ್ತುವರಿ 14.23 ಎಕರೆ ಹೊರತುಪಡಿಸಲಾಗಿದೆ.

### ಗ್ರಾಮ: ಆಲಮನೆ

### ಸ.ನಂ. 55– 51–00

**ಉತ್ತರಕ್ಕೆ:** ಪ್ರಾರಂಭಿಕ ಸ್ಥಾನವು ಇದೇ ಗ್ರಾಮದ ಸ.ನಂ. 55 ಕ್ಕೆ ಹೊಂದಿಕೊಂಡ ಸ.ನಂ. 58ರ ಸಾಮಾನ್ಯ ಗಡಿಯು ಅಲ್ಲದೆ ಸಾಲಗಡಿ ಲಘು ಅರಣ್ಯದ ಗಡಿರೇಖೆಯಲ್ಲಿ ಸ.ನಂ. 58ರ ಪಶ್ಚಿಮದ ಮೂಲೆಯಲ್ಲಿ ಸ್ಥಿರವಾಗಿರುತ್ತದೆ. ಪುನ: ಇಲ್ಲಿಂದ ಸ.ನಂ. 55 ಕ್ಕೆ ಹೊಂದಿಕೊಂಡ ಸ.ನಂ. 58, 27, 29, 30, 31, 36, 37, 38, 41, 40, 43, 44, 45, 47(ಕೆರೆ), 48, 55, 51, 53, ದಕ್ಷಿಣ ಗಡಿ 52, 55, 47(ಕೆರೆ) 46, 44, 43, 42, 39, 38, 36, 35, 34, 25, 24, 12, 13, 14 ಮತ್ತು 15 ಇವುಗಳ ಸಾಮಾನ್ಯ ಗಡಿಯಲ್ಲೇ ಚಲಿಸಿ ಸ.ನಂ. 15ರ ಈಶಾನ್ಯ ಮೂಲೆಯಲ್ಲಿ ಸಂಧಿಸುತ್ತದೆ.

**ಪೂರ್ವಕ್ಕೆ:** ಪುನ: ಇಲ್ಲಿಂದ ಸ.ನಂ.55 ಕ್ಕೆ ಹೊಂದಿಕೊಂಡ ಕೆರೆ ಸ.ನಂ.16 ಮತ್ತು 23ರ ಸಾಮಾನ್ಯ ಗಡಿಯಲ್ಲೇ ಸ.ನಂ.32 ಸರಪಳಿಗಳ ದೂರವನ್ನು ನೈರುತ್ಯಾಭಿಮುಖವಾಗಿ ಚಲಿಸಿ ಗ್ರಾಮ ಹೊನ್ನೇಕೆರೆ ಗ್ರಾಮದ ಸ.ನಂ. 51 ಆಲಮನೆ ಗ್ರಾಮದ ಸ.ನಂ. 23, 55 ಇವುಗಳು ಕೂಡುವ ಹಡಗಿನಮಕ್ಕಿ ಮೀಸಲು ಅರಣ್ಯದ ಗಡಿಯಲ್ಲಿ ಸಂಧಿಸುತ್ತದೆ. ಪುನ: ಇಲ್ಲಿಂದ ಸ.ನಂ.55ರ ಮುಖಾಂತರ ನೈರುತ್ಯಾಭಿಮುಖವಾಗಿ ಹಾದುಹೋಗುವ ಹಡಗಿನಮಕ್ಕಿ ಮೀಸಲು ಅರಣ್ಯ ಗಡಿಯಲ್ಲಿ ಸುಮಾರು 30 ಸರಪಳಿಗಳ ದೂರ ಕ್ರಮಿಸಿ, ಸ.ನಂ. 54ರ ಕೆರೆಯ ಈಶಾನ್ಯ ಮೂಲೆಯಿಂದ ಆಗ್ನೇಯಾಭಿಮುಖವಾಗಿ 5 ಸರಪಳಿಗಳ ಅಂತರದಲ್ಲಿರುವ ಬಿಂದುವಿನಲ್ಲಿ ಸೇರುತ್ತದೆ.

**ದಕ್ಷಿಣಕ್ಕೆ:** ಪುನ: ಇಲ್ಲಿಂದ ಸೀಮಾರೇಖೆಯು ನೈರುತ್ಯಾಭಿಮುಖವಾಗಿ ಇದೇ ಮೀಸಲು ಅರಣ್ಯ ಗಡಿಯಲ್ಲೇ 12 ಸರಪಳಿಗಳ ದೂರವನ್ನು ಸ.ನಂ. 54ರ ಕೆರೆಯ ಆಗ್ನೇಯ ಮೂಲೆಯನ್ನು ಸಂಧಿಸಿಕೊಂಡು ಇದೇ ಕೆರೆಯ ನೈರುತ್ಯ ಮೂಲೆಯಿಂದ ನೈರುತ್ಯಾಭಿಮುಖವಾಗಿ 2ವರೆ ವಾಯುವ್ಯಾಭಿಮುಖವಾಗಿ ಇದೇ ಮೀಸಲು ಅರಣ್ಯ ಗಡಿಯನ್ನು ಅನುಸರಿಸುತ್ತಾ 18 ಸರಪಳಿಗಳ ದೂರವನ್ನು ಚಲಿಸಿ ಇಂಗ್ಲಾಡಿ ಗ್ರಾಮದ ಸರಹದ್ದನ್ನು ಸಂಧಿಸುತ್ತದೆ.

**ಪಶ್ಚಿಮಕ್ಕೆ:** ಪುನ: ಇಲ್ಲಿಂದ ಇದೇ ಗ್ರಾಮದ ಸಾಮಾನ್ಯ ಗಡಿಯಲ್ಲೇ ಸುಮಾರು 4 ಸರಪಳಿ ದೂರವನ್ನು ಉತ್ತರಾಭಿಮುಖವಾಗಿ ಚಲಿಸಿ ಸಾಲಗಡಿ ಲಘು ಅರಣ್ಯ ಗಡಿಯಲ್ಲಿನ ಬಾಂದುವಿನಲ್ಲಿ ಸಂಧಿಸುತ್ತದೆ; ನಂತರ ಸ.ನಂ. 55ರ ಮುಖಾಂತರ ಈಶಾನ್ಯ ಮತ್ತು ವಾಯುವ್ಯಾಭಿಮುಖವಾಗಿ ಹಾದು ಹೋಗುವ ಇದೇ ಲಘು ಅರಣ್ಯ ಗಡಿಯಲ್ಲಿ ಕ್ರಮವಾಗಿ 14, 16 ಮತ್ತು 19 ಸರಪಳಿಗಳ ದೂರವನ್ನು ಸ.ನಂ. 52ರ ವಾಯುವ್ಯ ಮೂಲೆ 41ರ ವಾಯುವ್ಯ ಮೂಲೆಯನ್ನು ಸಂಧಿಸುತ್ತಾ ಪ್ರಾರಂಭಿಕ ಸ್ಥಾನವನ್ನು ಸೇರುತ್ತದೆ.

**ಷರಾ**

1) ನಕ್ಷೆಯಲ್ಲಿ ಗುರುತು ಮಾಡಲಾದ ಒತ್ತುವರಿ 25-07 ಎಕರೆ ಹೊರತು ಪಡಿಸಲಾಗಿದೆ.

**ಗ್ರಾಮ: ಹೇರಂಭಾಪುರ**

**ಸ.ನಂ. 7, 10, 11, 54, 55 ಮತ್ತು 56**

**ಉತ್ತರಕ್ಕೆ:** ಪ್ರಾರಂಭಿಕ ಸ್ಥಾನವು ಹೊನ್ನೇಕೇರಿ ಗ್ರಾಮದಸ.ನಂ. 44, 16 ಮತ್ತು 21 ಹಾಗೂ ಹೇರಂಭಾಪುರ ಗ್ರಾಮದ ಸ.ನಂ. 7ರ ಕೂಡು ಬಾಂದುವಿನಲ್ಲಿ ಸ್ಥಿರವಾಗಿರುತ್ತದೆ. ಈ ಸ್ಥಾನದಿಂದ ಸೀಮಾರೇಖೆಯು ಪೂರ್ವಾಭಿಮುಖವಾಗಿ ಸುಮಾರು 7 ಸರಪಳಿಗಳ ದೂರ ಕ್ರಮಿಸಿ ಸ.ನಂ. 7ರ ಈಶಾನ್ಯ ಮೂಲೆಯನ್ನು ಪಟ್ಲಮನೆ, ಹೊನ್ನೇಕೇರಿ, ಹೇರಂಭಾಪುರ ಗ್ರಾಮದ ಗಡಿಯಲ್ಲಿ ಸಂಧಿಸುತ್ತದೆ. ಪುನ: ಇಲ್ಲಿಂದ ಆಗ್ನೇಯಾಭಿಮುಖವಾಗಿ ಸುಮಾರು 35ವರೆ ಸರಪಳಿಗಳ ದೂರವನ್ನು ಪಟ್ಲಮನೆ ಗ್ರಾಮದ ಗಡಿಯಲ್ಲೇ ಚಲಿಸಿ ಇದೇ ಗ್ರಾಮದ ಗಡಿಯಲ್ಲಿ ಸ.ನಂ.7 ಮತ್ತು 8ರ 2 ಗುಪ್ಪೆ ಬಾಂದಿನಲ್ಲಿ ಸಂಧಿಸುತ್ತದೆ. ಪುನ: ಇಲ್ಲಿಂದ ನೈರುತ್ಯಾಭಿಮುಖವಾಗಿ 4 ಸರಪಳಿ ದೂರವನ್ನು ಸ.ನಂ.7 ಮತ್ತು 8 ರ ಸಾಮಾನ್ಯ ಗಡಿಯಲ್ಲೇ ಚಲಿಸಿ ಸ.ನಂ. 7, 8 ಮತ್ತು 56 ಇವುಗಳು ಕೂಡುವ ಮುಕುಪ್ಪೆ ಬಾಂದಿನಲ್ಲಿ ಸಂಧಿಸುತ್ತದೆ. ಪುನ: ಇಲ್ಲಿಂದ ಸ.ನಂ.56 ರ ಗಡಿಗೆ ಹೊಂದಿಕೊಂಡ ಸ.ನಂ. 8, 6, 1, 98, 97, 95, 96, 92, 91, 89, 88, 87 ಮಜರೆ 77, 76, 72, 71, 67, 66, 65, 64, 63, 62, 61, 60, 59, 57, 58, 68, 69, 70, 73, 74, 75, 78, 80, 5 ಇವುಗಳಿಗೆ ಸಾಮಾನ್ಯ ಗಡಿಯಲ್ಲೇ ಚಲಿಸಿ ಸ.ನಂ. 5, 6, 8 ಮತ್ತು 56 ಇವುಗಳು ಕೂಡುವ ಬಾಂದುಗಳ ಸ್ಥಾನದಲ್ಲಿ ಸಂಧಿಸುತ್ತದೆ. ಪುನ: ಇಲ್ಲಿಂದ ಈಶಾನ್ಯಾಭಿಮುಖವಾಗಿ ಸ.ನಂ. 56 ರ ಗಡಿ ಗೆ ಹೊಂದಿಕೊಂಡ ಸ.ನಂ. 8 ಮತ್ತು 9ರ ದಕ್ಷಿಣ ಸಾಮಾನ್ಯ ಗಡಿಯನ್ನೇ ಅನುಸರಿಸುತ್ತಾ ಸ.ನಂ. 9, 100, 1 ಮತ್ತು 56 ಇವುಗಳು ಕೂಡುವ ಬಾಂದುಗಳ ಸ್ಥಾನದಲ್ಲಿ ಸಂಧಿಸುತ್ತದೆ. ಪುನ: ಇಲ್ಲಿಂದ ಈಶಾನ್ಯಾಭಿಮುಖವಾಗಿ ಸುಮಾರು 10 ಸರಪಳಿಗಳ ದೂರವನ್ನು ಸ.ನಂ. 100 ಮತ್ತು 11ರ ಸಾಮಾನ್ಯ ಗಡಿಯಲ್ಲೇ ಚಲಿಸಿ ಸ.ನಂ.100 ರ ಈಶಾನ್ಯ ಮೂಲೆಯಲ್ಲಿ ಸಂಧಿಸುತ್ತದೆ. ಪುನ: ಇಲ್ಲಿಂದ ವಾಯುವ್ಯಾಭಿಮುಖವಾಗಿ ಸುಮಾರು 9 ಸರಪಳಿಗಳ ದೂರವನ್ನು ಸ.ನಂ. 100 ರಿಂದ 108 ವರೆಗಿನ ಉತ್ತರದ ಗಡಿಯಲ್ಲೇ ಚಲಿಸಿ 108 ರ ವಾಯುವ್ಯ ಮೂಲೆಯನ್ನು ಸಂಧಿಸುತ್ತದೆ. ಪುನ: ಇದೇ ಸ್ಥಾನದಿಂದ ನೈರುತ್ಯಾಭಿಮುಖವಾಗಿ 8 ಸರಪಳಿಗಳ ದೂರವನ್ನು ಸ.ನಂ. 108 ಪಶ್ಚಿಮ ಮತ್ತು ವಾಯುವ್ಯಾಭಿಮುಖವಾಗಿ ಸ.ನಂ. 9ರ ಉತ್ತರದ ಗಡಿಯಲ್ಲಿ ಸುಮಾರು 10 ಸರಪಳಿಗಳ ದೂರವನ್ನು ಕ್ರಮಿಸಿ ಸ.ನಂ.8, 9 ಮತ್ತು 10 ಇವುಗಳು ಪಟ್ಲಮನೆ ಗ್ರಾಮ ಹಾಗೂ ಇದೇ ಗ್ರಾಮದ ಗಡಿಗೆ ಹೊಂದಿಕೊಂಡ ಸಾಮಾನ್ಯ ಗಡಿಯಲ್ಲಿ ಸಂಧಿಸುತ್ತದೆ. ಪುನ: ಇದೇ ಸ್ಥಾನದಿಂದ ಈಶಾನ್ಯಾಭಿಮುಖವಾಗಿ ಸುಮಾರು 10 ಸರಪಳಿ ದೂರವನ್ನು ಇದೇ ಗ್ರಾಮಗಳ ಸಾಮಾನ್ಯ ಗಡಿಯಲ್ಲೇ ಕ್ರಮಿಸಿ ಸ.ನಂ. 10 ರ ವಾಯುವ್ಯ ಮೂಲೆಯನ್ನು ಸೇರುತ್ತದೆ. ಪುನ: ಇಲ್ಲಿಂದ ಕ್ರಮವಾಗಿ ಆಗ್ನೇಯ, ಈಶಾನ್ಯ ಮತ್ತು ಆಗ್ನೇಯ ದಿಕ್ಕಿನಲ್ಲೇ ಸುಮಾರು 17, 26 ಮತ್ತು 18ವರೆ ಸರಪಳಿ ದೂರವನ್ನು ಸ.ನಂ. 10 ಮತ್ತು 11ರ ಉತ್ತರದ ಗಡಿಗೆ ಹೊಂದಿಕೊಂಡ ಗ್ರಾಮ ಪಟ್ಲಮನೆ ಮತ್ತು ಬೆಳಂಗಿ ಗಡಿಯಲ್ಲೇ ಚಲಿಸಿ ಗ್ರಾಮ ಬೆಳಂಗಿ ಗಡಿಯಲ್ಲಿ ಸಂಧಿಸುತ್ತದೆ.

**ಪೂರ್ವಕ್ಕೆ:** ಇದೇ ಸ್ಥಾನದಿಂದ ಕ್ರಮವಾಗಿ ದಕ್ಷಿಣ ಮತ್ತು ಆಗ್ನೇಯಾಭಿಮುಖವಾಗಿ 28 ಮತ್ತು 17 ಸರಪಳಿಗಳ ದೂರವನ್ನು ಸ.ನಂ.11 ಕ್ಕೆ ಹೊಂದಿಕೊಂಡ ಬೆಳಂಗಿ ಗ್ರಾಮದ ಸಹ ಗಡಿಯಲ್ಲೇ ಚಲಿಸಿ ಸ.ನಂ.14, 13 ಮತ್ತು 11 ರ ಕೂಡು ಬಾಂದಿನ ಬಿಂದುವನ್ನು ಇದೇ ಗ್ರಾಮಗಳ ಸರಹದ್ದಿನಲ್ಲಿ ಸಂಧಿಸುತ್ತದೆ. ಪುನ: ಈ ಸ್ಥಾನದಿಂದ ಸ.ನಂ.11 ಕ್ಕೆ ಹೊಂದಿಕೊಂಡ ಸ.ನಂ. 13, 12, 16, 20 ಮತ್ತು 21 ಇವುಗಳ ಸಾಮಾನ್ಯ ಗಡಿಯಲ್ಲೇ ಚಲಿಸಿ ಸ.ನಂ. 56, 11 ಮತ್ತು 21 ರ ಮುಕ್ಕುಪ್ಪೆ ಬಾಂದನ್ನೇ ಸಂಧಿಸುತ್ತದೆ.

**ದಕ್ಷಿಣಕ್ಕೆ:** ಪುನ: ಇದೇ ಸ್ಥಾನದಿಂದ ಸ.ನಂ.56 ಕ್ಕೆ ಹೊಂದಿಕೊಂಡ ಸ.ನಂ.21, 22, 23, 26, 28, 27 ರ ದಕ್ಷಿಣದ ಗಡಿ 41, 42 ಮತ್ತು 43 ಇವುಗಳ ಸಾಮಾನ್ಯ ಗಡಿಯಲ್ಲೇ ಚಲಿಸಿ ಸ.ನಂ.56,43,54 ಮತ್ತು 55 ಇವುಗಳು ಸಂಧಿಸುವ ಬಾಂದುವಿನ ಸ್ಥಾನವನ್ನು ಸೇರುತ್ತದೆ. ಪುನ: ಇದೇ ಸ್ಥಾನದಿಂದ ಸ.ನಂ.54 ಕ್ಕೆ ಹೊಂದಿಕೊಂಡ ಸ.ನಂ.43,44,41,45,53,99 ಮತ್ತು 51 ಇವುಗಳ ಸಾಮಾನ್ಯ ಗಡಿಯಲ್ಲೇ ಚಲಿಸಿ ಸ.ನಂ.51,54 ಮತ್ತು ಕೀರಣಕೆರೆ ಗ್ರಾಮದ ಸ.ನಂ.12 ಮತ್ತು 77 ಇವುಗಳು ಕೂಡುವ ಸ್ಥಾನ ಈ ಗ್ರಾಮಗಳ ಸಾಮಾನ್ಯ

ಸರಹದ್ದಿನಲ್ಲಿ ಸೇರುತ್ತದೆ. ಪುನ: ಇಲ್ಲಿಂದ ನೈರುತ್ಯಾಭಿಮುಖವಾಗಿ 5 ಸರಪಳಿ ದೂರವನ್ನು ಇದೇ ಗ್ರಾಮಗಳ ಸಹಗಡಿಯಲ್ಲೇ ಹಾಗೂ 3 ಸರಪಳಿ ದೂರವನ್ನು ಈ ಸಹಗಡಿಗೆ ಹೊಂದಿಕೊಂಡ ಹಡಗಿನಮಕ್ಕಿ ಮೀಸಲು ಅರಣ್ಯದ ಗಡಿಯಲ್ಲಿ ಚಲಿಸಿ ಕೀರಣಕೆರೆ ಗ್ರಾಮದ ಸ.ನಂ.10,77 ಮತ್ತು ಹೇರಂಭಾಪುರದ ಸ.ನಂ.54 ಇವುಗಳು ಕೂಡುವ ಸ್ಥಾನ ಈ ಗ್ರಾಮಗಳ ಸಾಮಾನ್ಯ ಗಡಿಗೆ ಹೊಂದಿಕೊಂಡ ಹಡಗಿನಮಕ್ಕಿ ಮೀಸಲು ಅರಣ್ಯದ ಗಡಿ ಬಿಂದುವಿನಲ್ಲಿ ಸಂಧಿಸುತ್ತದೆ. ಪುನ: ಇಲ್ಲಿಂದ ಉತ್ತರಾಭಿಮುಖವಾಗಿ ಸುಮಾರು 20 ವರೆ ಸರಪಳಿಗಳ ದೂರವನ್ನು ಸ.ನಂ.54 ರ ಪಶ್ಚಿಮದ ಗಡಿಗೆ ಹೊಂದಿಕೊಂಡ ಕೀರಣಕೆರೆ ಗ್ರಾಮದ ಸ.ನಂ.10 ಮತ್ತು 11 ರ ಸಾಮಾನ್ಯ ಗಡಿಯಾದ ಹಡಗಿನಮಕ್ಕಿ ಮೀಸಲು ಅರಣ್ಯ ಗಡಿಯಲ್ಲೇ ಚಲಿಸಿ, ಕೀರಣಕೆರೆ ಗ್ರಾಮದ ಸ.ನಂ.10 ರ ಈಶಾನ್ಯ ಮೂಲೆಯನ್ನು ಇದೇ ಗ್ರಾಮಗಳ ಹಾಗೂ ಮೀಸಲು ಅರಣ್ಯದ ಗಡಿಯಲ್ಲಿ ಸಂಧಿಸುತ್ತದೆ. ಪುನ: ಇಲ್ಲಿಂದ ಕ್ರಮವಾಗಿ ಸ.ನಂ.54 ರ ಮುಖಾಂತರ ಆಗ್ನೇಯ ಮತ್ತು ಈಶಾನ್ಯಾಭಿಮುಖವಾಗಿ ಸುಮಾರು 7 ಮತ್ತು 15 ಸರಪಳಿ ದೂರವನ್ನು ಕ್ರಮಿಸುವ ಹಡಗಿನಮಕ್ಕಿ ಮೀಸಲು ಅರಣ್ಯದ ಗಡಿಯಂತೆ ಚಲಿಸಿ, ಸ.ನಂ.43 ರ ಪಶ್ಚಿಮ ಮೂಲೆಯಿಂದ ನೈರುತ್ಯಾಭಿಮುಖವಾಗಿ ಸ.ನಂ.55 ಮತ್ತು 54 ರ ಸಾಮಾನ್ಯ ಗಡಿಯಲ್ಲಿ ಸುಮಾರು 12 ವರೆ ಸರಪಳಿ ಅಂತರವಿರುವ ಬಿಂದು ಇದೇ ಮೀಸಲು ಅರಣ್ಯದ ಮೂಲೆಯಲ್ಲಿ ಸೇರುತ್ತದೆ. ಪುನ: ಇದೇ ದಿಕ್ಕನ್ನೇ ಅನುಸರಿಸುತ್ತಾ ಸದರಿ ಸಹಗಡಿಗಳಲ್ಲೇ ಸುಮಾರು 27 ಸರಪಳಿ ದೂರ ಕ್ರಮಿಸಿ ಸ.ನಂ. 54, 55 ಮತ್ತು ಬೆಕ್ಕನೂರು ಗ್ರಾಮದ ಸ.ನಂ. 3 ಇವುಗಳು ಕೂಡುವ ಸ್ಥಾನ ಈ ಗ್ರಾಮಗಳ ಸಾಮಾನ್ಯ ಗಡಿ ಹಾಗೂ ಇದೇ ಮೀಸಲು ಅರಣ್ಯದ ಮೂಲೆಯಲ್ಲಿ ಸಂಧಿಸುತ್ತದೆ.

**ಪಶ್ಚಿಮಕ್ಕೆ:** ಇದೇ ಸ್ಥಾನದಿಂದ 55 ಮತ್ತು 56 ರ ಮೂಲಕ ವಿವಿಧ ದಿಕ್ಕಿನಲ್ಲಿ ಚಲಿಸುವ ಹಡಗಿನಮಕ್ಕಿ ಮೀಸಲು ಅರಣ್ಯದ ಗಡಿ ವಿವರಣೆಯಂತೆ ಚಲಿಸಿ ಗ್ರಾಮ ಹೊನ್ನೇಕೇರಿ ಮತ್ತು ಹೇರಂಭಾಪುರದ ಸಾಮಾನ್ಯ ಗಡಿಯಲ್ಲಿರುವ ಬಾಂದುವಿನಲ್ಲಿ ಸಂಧಿಸುತ್ತದೆ. ಪುನ: ವಾಯುವ್ಯಾಭಿಮುಖವಾಗಿ ಇದೇ ಗ್ರಾಮಗಳ ಸಹಗಡಿ (ಹೇರಂಭಾಪುರ ಗ್ರಾಮದ ಸ.ನಂ.56 ಮತ್ತು 7 ರ ಪಶ್ಚಿಮದ ಗಡಿ) ಯನ್ನೇ ಅನುಸರಿಸುತ್ತಾ ಪ್ರಾರಂಭಿಕ ಸ್ಥಾನವನ್ನು ಸೇರುತ್ತದೆ.

**ಷರಾ: 1) ಸ.ನಂ.7 ಕ್ಕೆ**

ಅ) ಹಿಡುವಳಿ ಸ.ನಂ.ಗಳಾದ 109 ಮತ್ತು 110 ನ್ನು ಈ ಜೈವಿಕಧಾಮದಿಂದ ಹೊರತುಪಡಿಸ ಬಹುದಾಗಿದೆ.

ಆ) ನಕ್ಷೆಯಲ್ಲಿ ಗುರುತು ಮಾಡಲಾದ ಒತ್ತುವರಿ 2–35 ಎಕರೆ ಹೊರತು ಪಡಿಸಲಾಗಿದೆ.

**2) ಸ.ನಂ. 10 ಕ್ಕೆ**

ಅ) ನಕ್ಷೆಯಲ್ಲಿ ಗುರುತಿಸಲಾದ ಗಡಿಭಾಗ 8–16 ಎಕರೆ ಪ್ರದೇಶವನ್ನು ಬಿಡಲು ವಿವರಿಸಿದಂತೆ ಶಾಲೆ, ಆಶ್ರಯ ನಿವೇಶನ, ಇತರೇ ಬಗ್ಗೆ ಈ ವಿಸ್ತೀರ್ಣಗಳನ್ನು ಹೊರತುಪಡಿಸಬಹುದಾಗಿದೆ.

ಆ) ನಕ್ಷೆಯಲ್ಲಿ ಗುರುತಿಸಲಾದ ರಸ್ತೆ ಮತ್ತು ಅರಣ್ಯ ಇಲಾಖೆಯಿಂದ ಬೆಳೆಸಲಾದ ಅಕೇಶಿಯಾ ನೆಡುತೋಪು ಒಟ್ಟು 3–05 ಎಕರೆ ಪ್ರದೇಶವನ್ನು ಹೊರತುಪಡಿಸಿರುವುದಿಲ್ಲ.

ಇ) ನಕ್ಷೆಯಲ್ಲಿ ಗುರುತು ಮಾಡಲಾದ ಒತ್ತುವರಿ 3–27 ಎಕರೆ ಹೊರತುಪಡಿಸಲಾಗಿದೆ.

**3) ಸ.ನಂ. 11ಕ್ಕೆ**

ಅ) ನಕ್ಷೆಯಲ್ಲಿ ಗುರುತು ಮಾಡಲಾದ ಒತ್ತುವರಿ 4–31 ಎಕರೆ ಹೊರತುಪಡಿಸಲಾಗಿದೆ.

**4) ಸ.ನಂ. 54ಕ್ಕೆ**

ಅ) ನಕ್ಷೆಯಲ್ಲಿ ಗುರುತು ಮಾಡಲಾದ ಒತ್ತುವರಿ 15–13 ಎಕರೆ ಹೊರತುಪಡಿಸಲಾಗಿದೆ.

**5) ಸ.ನಂ. 56 ಕ್ಕೆ**

ಅ) ನಕ್ಷೆಯಲ್ಲಿ ಗುರುತು ಮಾಡಲಾದ ಒತ್ತುವರಿ 37–25 ಎಕರೆ ಹೊರತುಪಡಿಸಲಾಗಿದೆ.

**ಗ್ರಾಮ : ಬೆಕ್ಕನೂರು**

**ಸ.ನಂ. 2, 4, 12 ಮತ್ತು 21**

**ಉತ್ತರಕ್ಕೆ:** ಪ್ರಾರಂಭಿಕ ಸ್ಥಾನವು ಇದೇ ಗ್ರಾಮದ ಸ.ನಂ.53 ಮತ್ತು 2 ಹಾಗೂ ಹಡಗಿನಮಕ್ಕಿ ಗ್ರಾಮದ ಸ.ನಂ. 4 ಇವುಗಳು ಸಂಧಿಸುವ ಈ ಎರಡು ಗ್ರಾಮಗಳ ಸರಹದ್ದಿನಲ್ಲಿ ಸ್ಥಿರವಾಗಿರುತ್ತದೆ. ಇಲ್ಲಿಂದ ಈಶಾನ್ಯಾಭಿಮುಖವಾಗಿ ಸುಮಾರು 38 ವರೆ ಸರಪಳಿಗಳ ದೂರವನ್ನು ಇದೇ ಗ್ರಾಮಗಳ ಸಹಗಡಿಯಲ್ಲಿ ಚಲಿಸಿ ಹಡಗಿನಮಕ್ಕಿ ಮೀಸಲು ಅರಣ್ಯದ ಗಡಿಯನ್ನು ಇದೇ ಗ್ರಾಮಗಳ ಸಹಗಡಿಯಲ್ಲಿನ ಬಿಂದುವಿನಲ್ಲಿ ಸಂಧಿಸುತ್ತದೆ.

**ಪೂರ್ವಕ್ಕೆ:** ಪುನ: ಇದೇ ಸ್ಥಾನದಿಂದ ಸ.ನಂ. 2, 4, 12 ಮತ್ತು 21 ರ ಮೂಲಕ ಹಾದು ಹೋಗುವ ಹಡಗಿನಮಕ್ಕಿ ಮೀಸಲು ಅರಣ್ಯ ಗಡಿ ವಿವರಣೆಯಂತೆ ಇದೇ ಅರಣ್ಯದ ಸೀಮಾರೇಖೆಯನ್ನು ಅನುಸರಿಸುತ್ತಾ ಸ.ನಂ. 12 ರ ಆಗ್ನೇಯ ಮೂಲೆಯಿಂದ ವಾಯುವ್ಯಾಭಿಮುಖವಾಗಿ 11 ಸರಪಳಿ ಅಂತರದಿಂದ ಇದರ ಕೀರಣಕೆರೆ ಗಡಿಯಲ್ಲಿನ ಬಿಂದುವಿನಲ್ಲಿ ಸೇರುತ್ತದೆ. ಪುನ: ಇದೇ ಸ್ಥಾನದಿಂದ ಆಗ್ನೇಯಾಭಿಮುಖವಾಗಿ 11 ಸರಪಳಿ ದೂರವನ್ನು ಕೀರಣಕೆರೆ ಗ್ರಾಮದ ಗಡಿಯಲ್ಲೇ ಚಲಿಸಿ, ಕೀರಣಕೆರೆ, ಬೆಕ್ಕನೂರು ಮತ್ತು ಹಿರೇಕೊಡುಗೆ ಗ್ರಾಮಗಳ ಮುಕ್ಕುಪ್ಪೆ ಬಾಂದಿನಲ್ಲಿ ಸಂಧಿಸುತ್ತದೆ.

**ದಕ್ಷಿಣಕ್ಕೆ:** ಇದೇ ಸ್ಥಾನದಿಂದ ನೈರುತ್ಯಾಭಿಮುಖವಾಗಿ 65 ಸರಪಳಿಗಳ ದೂರವನ್ನು ಬೆಕ್ಕನೂರು–ಹಿರೇಕೊಡುಗೆ ಗ್ರಾಮಗಳ ಸಹಗಡಿಯಲ್ಲೇ ಚಲಿಸಿ ಸ.ನಂ.12 ರ ನೈರುತ್ಯ ಮೂಲೆಯನ್ನು ಇದೇ ಸಹಗಡಿಯಲ್ಲಿ ಸೇರುತ್ತದೆ.
**ಪಶ್ಚಿಮಕ್ಕೆ:** ಪುನ: ಇಲ್ಲಿಂದ ವಾಯುವ್ಯಾಭಿಮುಖವಾಗಿ ಬೆಕ್ಕನೂರು ಗ್ರಾಮದ ಸ.ನಂ.21 ಮತ್ತು 31 ರ ಸಹಗಡಿಯನ್ನೇ ಅನುಸರಿಸುತ್ತಾ ಸುಮಾರು 68 ಸರಪಳಿ ದೂರ ಕ್ರಮಿಸಿ ಇದೇ ಗ್ರಾಮಗಳ ಸ.ನಂ.31, 52, 53 ಮತ್ತು 21 ಇವುಗಳು ಕೂಡುವ ನಾಲ್ಲುರ ಬಾಂದು ಸ್ಥಾನದಲ್ಲಿ ಸಂಧಿಸುತ್ತದೆ. ಪುನ: ಇಲ್ಲಿಂದ ಸ.ನಂ.12 ಕ್ಕೆ ಹೊಂದಿಕೊಂಡ ಸ.ನಂ.53, 16, 18, 19, 20, 10, 9, 8, 7, 63, 6, 58, 5 ಇವುಗಳ ಸಹಗಡಿಯಲ್ಲೇ ಚಲಿಸಿ ಸರ್ವೆ ನಂ. 5 ರ ಪೂರ್ವದ ಮೂಲೆಯಲ್ಲಿ ಸಂಧಿಸುತ್ತದೆ. ನಂತರ ಸ.ನಂ. 12 ಕ್ಕೆ ಹೊಂದಿಕೊಂಡ ಸ.ನಂ.5, 60, 6, 59, 63, 7, 11, 65, 10, 13, 14 ರ ಸಹಗಡಿಯಲ್ಲೇ ಚಲಿಸಿ ಸ.ನಂ. 14, 12, 4, 2 ಮತ್ತು ಊರಿನ ಕೂಡುವ ಬಾಂದನ್ನು ಸಂಧಿಸುತ್ತದೆ. ಇಲ್ಲಿಂದ ಸ.ನಂ. 2 ಕ್ಕೆ ಹೊಂದಿಕೊಂಡ ಊರು 1, 57, 56, 55, 33 ರ ಸಹಗಡಿಯಲ್ಲಿ ಪ್ರಾರಂಭಿಕ ಸ್ಥಾನವನ್ನು ಸೇರುತ್ತದೆ.

**ಷರಾ: 1) ಸರ್ವೆ ನಂ.2ಕ್ಕೆ**

ನಕ್ಷೆಯಲ್ಲಿ ಗುರುತು ಮಾಡಿದ ಒತ್ತುವರಿ 0.30 ಎಕರೆ ಹೊರತುಪಡಿಸಲಾಗಿದೆ.

**ಷರಾ: 1) ಸರ್ವೆ ನಂ.12ಕ್ಕೆ**

ನಕ್ಷೆಯಲ್ಲಿ ಗುರುತು ಮಾಡಿದ ಒತ್ತುವರಿ 25.00 ಎಕರೆ ಹೊರತುಪಡಿಸಲಾಗಿದೆ.

**ಷರಾ: 1) ಸರ್ವೆ ನಂ.21 ಕ್ಕೆ**

ನಕ್ಷೆಯಲ್ಲಿ ಗುರುತು ಮಾಡಿದ ಒತ್ತುವರಿ 106.25 ಎಕರೆ ಹೊರತುಪಡಿಸಲಾಗಿದೆ. ಹಕ್ಕು ಮತ್ತು ಸವಲತ್ತು:

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಕೆ.ವಿ. ಜಯಲಕ್ಷ್ಮಿ**
ಪಿ.ಆರ್.56 ಸರ್ಕಾರದ ಅಧೀನ ಕಾರ್ಯದರ್ಶಿ,
ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ.

## FOREST, ECOLOGY AND ENVIRONMENT SECRETARIAT
## NOTIFICATION
## NO. FEE 247 FGL 2002, Bangalore, Dated:17th January, 2004

**Sub:** Collection of Net Present Value for the forest land diverted for non-forestry purposes under Forest (Conservation) Act, 1980- reg.

The Hon`ble Supreme Court of India in its order dated 30.10.2002 has issued directions to all the States and Union Territories to collect the Net Present Value from the user agencies for all the land diverted for non-forest purposes at the rate varying between Rs. 5.8 lakhs to Rs. 9.2 lakhs per ha. of forest land depending upon the quantity and the density of the land in question diverted for non-forest purpose.

The Government of India, Ministry of Environment and Forests, New Delhi in letter No.F.No.5-1/98-FC (Part-II) dated 11.8.2003 while enclosing a copy of the orders of the Hon`ble Supreme Court, dated 1.8.2003 in Interlocutory application No. 826 and 859 in I.A. No.566 in W.P.(Civil) No.202 of 1995 in the matter of Compensatory Afforestation fund regarding collection of Net Present Value(NPV) from the user agencies directed to comply with the orders of the Hon`ble Supreme Court in respect of collection of the Net Present Value (NPV) for the forest area approved for diversion after 30.10.2002 for non-forestry purpose from the user agencies at the rates prescribed by the Hon`ble Supreme Court in its order dated 30.10.2002 issued on 12.11.2002. This NPV should be realized before Stage II (Final) approval. Further in Government of India letter dated 18.9.2003 guidelines are issued for the recovery/collection of NPV of the forest land being diverted for non forest purposes under Forest (Conservation) Act, 1980 in the following manner.

1. NPV shall be charged in all those cases which have been granted in- Principle approval after 30.10.2002.
2. NPV shall be realized before Stage-II(Final) approval.
3. Hon`ble Court has given a range for the rates i.e., Rs. 5.80 lakhs per hectare to Rs. 9.20 lakhs per hectare for NPV depending upon the quantity and density of land in question, converted for non-forestry use. Therefore, the State/UT Governments should charge NPV within the given rates depending upon the quality of forest, density and the type of species in the area.
4. The State/UT Governments shall transfer these funds to Compensatory Afforestation Management and Planning Agency(CAMPA), as and when created.

In accordance with the guidelines, the Principal Chief Conservator of Forests, Bangalore in his letter No. A5(6)GFL/CR-02/97-98, dated 22.10.2003 and 16.12.2003 has suggested the NPV rates depending upon the quality of the forest, density and the type of species in the area.

In compliance with the orders of the Hon`ble Supreme Court and taking into consideration the suggestion of the Principal Chief Conservator of Forests, the NPV for the forest area diverted after 30.10.2002 for the non-forest purpose shall be collected from the user agencies at the rates prescribed in the Annexure-I read in conjunction with Annexure-II provided that the NPV prescribed in this notification shall be subject to revision / variation as the case may be.

By order and in the name of the Governor of Karnataka,
**S.R.VATSALA**
Under Secretary to Government,
Forest, Ecology and Environment Deptt.

**ANNEXURE – I**

| Sl. No. | Net Present Value proposed (Rs. in lakhs/ha.) | Type of Forest land | Crown Density | Geographical area |
|---|---|---|---|---|
| 1 | 2 | 3 | 4 | 5 |
| 1. | 5.80 | Rocky areas Without vegetation | - Nil - | All the taluks of eastern plain |
| 2. | 6.20 | Grassy blanks in Dry Zone | -,Nil - with some ground cover | All the taluks of eastern plain |
| 3. | 6.80 | Dry Scrub and Dry Thom forests | Below 0.1 | All the taluks of eastern plain |
| 4. | 7.40 | Dry Deciduous forests | 0.1 and above | All the taluks of eastern plain |
| 5. | 7.60 | Dry Deciduous forests | Below 0.25 | All the taluks of Western Ghats |
| 6. | 8.00 | Dry Deciduous forests | 0.25 and above | All the taluks of Western Ghats |
| 7. | 8.30 | Moist Deciduous forests | Below 0.25 | All the taluks of Western Ghats |
| 8. | 8.60 | Moist Deciduous forests | 0.25 and above | All the taluks of Western Ghats |
| 9. | 8.80 | Grassy blanks in the ever-green forests zone | - Nil- | All the taluks of Western Ghats |
| 10. | 9.20 | Ever-green and Semi-evergreen, Shola and Mangrove forests. | All density classes | All the taluks of Western Ghats |

**ANNEXURE-II**

| S.L. No. | DISTRICTS | TALUKS OF EASTERN PLAINS | TALUKS OF WESTERN GHATS |
|---|---|---|---|
| 1 | 2 | 3 | 4 |
| 1. | BANGALORE- RURAL | 1. CHANNAPATNA<br>2. DEVVANAHALLI<br>3. DODDABALLAPURA<br>4. HOSKOTE<br>5. KANAKAPURA-PART<br>6. MAGADI<br>7. NELAMANGALA<br>8. RAMANAGAR | |
| 2. | BANGALORE-URBAN | 9. ANEKAL<br>10. BANGALORE-SOUTH<br>11. BANGALORE-NORTH | |
| 3. | BELLARY | 12. BELLARY<br>13. HADAGALLI<br>14. HAGARIBOMMANAHALLI<br>15. HOSPET<br>16. KUDALAGI<br>17. SANDUR<br>18. SIRAGUPPA | |
| 4. | DAVANAGERE | 19. CHANNAGIRI<br>20. HARAPANAHALLI<br>21. HONNALI<br>22. HARIHARA<br>23. DAVANAGERE<br>24. JAGALUR | |
| 5. | BIDAR | 25. AURAD<br>26. BASAVAKALYANA<br>27. BHALKI<br>28. BIDAR<br>29. HUMNABAD | |
| 6. | HASSAN | 30. ARKALGUD<br>31. ARASIKERE<br>32. CHANNARAYAPATNA<br>33. HOLENARASIPURA<br>34. HASSAN<br>35. BELUR | 1 SAKALESPURA<br>2.ALUR |

| 1 | 2 | 3 | 4 |
|---|---|---|---|
| 7. | KOLAR | 36. BAGEPALLI<br>37. BANGARAPET<br>38. CHIKKABALLAPURA<br>39. CHINAMANI<br>40. GUDIBANDE<br>41. KOLAR<br>42. MALUR<br>43. MULBAGAL<br>44. SIDALGATTA<br>45. SRINIVASAPURA<br>46. GOWRIBIDANUR | |
| 8. | TUMKUR | 47. CHIKKANAYAKANAHALLI<br>48. GUBBI<br>49. KORTAGERE<br>50. KUNIGAL<br>51. MADHUGIRI<br>52. PAVAGADA<br>53. SIRA<br>54. TIPUTUR<br>55. TUMKUR<br>56. TURUVEKERE | |
| 9. | GULBARGA | 57. GULBARGA<br>58. YADGIR<br>59. AFZALPUR<br>60. CHINCHOLI<br>61. CHITTAPUR<br>62. GEEVARGI<br>63. SEDAM<br>64. SHAHAPUR<br>65. ALAND<br>66. SHORAPUR | |
| 10. | BIJAPUR | 67. BIJAPUR<br>68. B.BAGEWADI<br>69. INDI<br>70. MUDDEBIHAL<br>71. SINDAGI | |
| 11. | BAGALKOT | 72. BAGALKOT<br>73. BILAGI<br>74. HUNGUND<br>75. JAMKHANDI<br>76. MUDHOL<br>77. BADAMI | |
| 12. | BELGAUM | 78. ATHANI<br>79. CHIKKODI<br>80. GOKAK<br>81. RAYABAG<br>82. RAMDURGA<br>83. HUKKERI<br>84. BAILAHONGALA (SAMPGAON)<br>85. SAUNDATHI(PARASAGAD | 3 KHANAPUR<br>4. BELGAUM |
| 13. | CHITRADURGA | 86. CHALLAKERE<br>87. CHITRADURGA<br>88. HIRIYUR<br>89. HOLALKERE<br>90. HOSADURGA<br>91. MALKALMURU | |
| 14. | HAVERI | 92. HAVERI<br>93. BYADAGI<br>94. HANAGAL<br>95. HIREKERUR<br>96. RANEBENNUR<br>97. SAVANUR<br>98. SHIGGAON | |

| 1 | 2 | 3 | 4 |
|---|---|---|---|
| 15. | GADAG | 99. GADAG<br>100.NARGUND<br>101.RONA<br>102.SHIRHATTI<br>103.MUNDARGI | |
| 16. | DHARWAD | 104. DHARWAD<br>105. HUBLI<br>106. KUNDOOL<br>107.NAVALGUND | 5.KALGHATHAGI |
| 17. | MYSORE | 108. HUNSUR(PART)<br>109. K.R.NAGAR<br>110.MYSORE<br>111.T.NARASIPURA<br>112.PIRIYAPATNA<br>113.NANJANGUD | 6.H.D.KOTE<br>(HUNSUR(PART) |
| 18. | CHAMARAJNAGAR | 114.CHAMARAJNAGAR<br>115.YELANDUR(PART) | 7 KOLLEGAL<br>8 GUNDLUPET<br>YELLANDUR(PART) |
| 19. | MANDYA | 116.K.R.PET<br>117.MADDUR<br>118.MALAVALLI<br>119.NAGAMANGALA<br>120.MANDYA<br>121.PAN DAVAPURA<br>122.SRIRANGAPATANA | |
| 20. | RAICHUR | 123.DEVADURGA<br>124.LINGASUGUR<br>125.MANVI<br>126.SINDHANUR<br>127.RAICHUR | |
| 21. | KOPPAL | 128.GANGAVATHI<br>129.KOPPAL<br>130.KUSTHAGI<br>131.YELBURGA | |
| 22. | SHIMOGA | | 9 SHIMOGA<br>10 TIRTHALLI<br>11 HOSANAGAR<br>12 SAGAR<br>13 SORAB<br>14 SHIKARIPURA<br>15 BHADRAVATHI |
| 23. | CHICKMAGALUR | 132.TARIKERE<br>133.KADUR | 16 MUDIGERE<br>17 SRINGERI<br>18 KOPPA<br>19 N.R.PURA<br>20 CHIKAMAGALUR |
| 24. | UTTARA KANNADA | | 21 KARWAR<br>22 ANKOLA<br>23 KUMTA<br>24 HONNAVAR<br>25 BHATKAL<br>26 SUPA(JOIDA)<br>27 HALIYAL<br>28 YELLAPUR<br>29 MUNDGOD<br>30 SIRSI<br>31 SIDDAPUR |
| 25. | DAKSHINA KANNADA | | 32 MANGALORE<br>33 BELTHANGADI<br>34 PUTTUR<br>35 BANTWAL<br>36 SULLYA |
| 26. | UDUPI | | 37 UDUPI<br>38 KUNDAPURA<br>39 KARKAL |
| 27. | KODAGU | | 40 MADIKERI<br>41 VIRAJPET<br>42 SOMWARPET |

**S.R.VATSALA**
Under Secretary to Government,
Forest, Ecology and Environment Deptt.

PR-64